॥ ಶ್ರೀರಸ್ತು ॥



# ಕರ್ಣಾಮೃತ

ಮೊಳೆಯಾರು ಶಂಕರನಾರಾಯಣಭಟ್ಟ, ವಿದ್ವಾನ್
ಗವರ್ನಮೆಂಟ್ ಕಾಲೇಜು,
ಮಂಗಳೂರು.

1951

# ಬಿನ್ನಹ

ಒಬ್ಬರಿಗೊಬ್ಬರು ಹೊಂದಿಕೆಯಾಗಿ ಬಾಳುವುದೇ ಸಮಾಜಜೀವನವು. ಅದು ಸುಗಮವಾಗಿ ಸಾಗುವುದಕ್ಕಾಗಿ ಮಾನವಕೋಟಿಯಲ್ಲಿ ಅನಾದಿಯಿಂದಲೂ ಕೆಲವು ಸಂಪ್ರದಾಯಗಳು ಏರ್ಪಟ್ಟಿವೆ. ದೇಶಕಾಲಾದಿಗಳಿಂದ ಯಾವ ತಡೆಯೂ ಇಲ್ಲದೆ ಪ್ರಪಂಚದಲ್ಲಿ ಸರ್ವಾನುಮತದಿಂದ ಪಾಲನೀಯಗಳಾದ ಆ ಸಮಾಜಸೂತ್ರಗಳನ್ನೇ ಆಚಾರಪದ್ಧತಿಗಳೆಂದೋ ಶಿಷ್ಟಸಂಪ್ರದಾಯಗಳೆಂದೋ ನೀತಿಗಳೆಂದೋ ಕರೆಯುವರು. ಅವುಗಳಲ್ಲಿ ಪ್ರಾಮುಖ್ಯವಾದವುಗಳನ್ನು ಪದ್ಯರೂಪವಾಗಿ ಬರೆದು ಬಾಯಿಪಾಠಮಾಡಿಸುತ್ತಿರುವುದು ನಮ್ಮ ಹಿರಿಯರ ವಾಡಿಕೆ. "ನೀತಿಬಾಹಿರನು ಮಾನವನಾಗಿ ಬಾಳಲಾರನು" ಎಂಬ ನಂಬಿಕೆಯಿಂದ ಜೀವನರಂಗದಲ್ಲಿ ಅಡಿಗಡಿಗೂ ಅನುಸರಿಸಬೇಕಾದ ಅಂತಹ ಕೆಲವು ಪ್ರಾಮುಖ್ಯವಿಷಯಗಳನ್ನು ಚಿತ್ತಭಿತ್ತಿಯಲ್ಲಿ ಅಚ್ಚೊತ್ತಿದಂತೆ ನಿಲ್ಲಿಸಬೇಕೆಂದು ಪುರಾಣಪ್ರಸಿದ್ಧಉದಾಹರಣೆಗಳಿಂದ ಹಿತಕಾಂಕ್ಷಿಯಾದ ಸನ್ಮಿತ್ರನ ಹಾಗೆ ಪ್ರತಿಪಾದಿಸುವ ಕವಿಪುಂಗವನ ಜಾಣ್ಮೆಗೆ ಎಣೆಯಿಲ್ಲ.

ಕಾಶ್ಮೀರದೇಶದ ಪ್ರಕಾಶೇಂದ್ರನ ಮಗನಾದ ಕ್ಷೇಮೇಂದ್ರನು ಸಂಸ್ಕೃತಸಾಹಿತ್ಯಕ್ಷೇತ್ರದಲ್ಲಿ ಅಪಾರವಾದ ಕೀರ್ತಿಯನ್ನು ಗಳಿಸಿಕೊಂಡವನು. ಆತನು ಬೇರೆ ಬೇರೆ ಶಾಸ್ತ್ರಗಳಲ್ಲಿ ಪಾರಂಗತನಾಗಿದ್ದನೆಂಬುದನ್ನು ಕವಿಕಂಠಾಭರಣವೇ ಮೊದಲಾದ ಮೂವತ್ತೆರಡಕ್ಕೂ ಮೇಲ್ಪಟ್ಟ ಆತನ ಕೃತಿರತ್ನಗಳೇ ಸಾರುತ್ತಿವೆ. ತನ್ನನ್ನು ವ್ಯಾಸದಾಸನೆಂದು ಹೇಳಿಕೊಂಡಿರುವ ಈ ಕವಿಪ್ರವರನು ಕಾಶ್ಮೀರದ ಅನಂತರಾಜನ ಹಾಗೂ ಅವನ ಮಗನಾದ ಕಲಶನ ಕಾಲದಲ್ಲಿ ಎಂದರೆ ಸುಮಾರು ಕ್ರಿ. ಶ. ಹನ್ನೊಂದನೆ ಶತಮಾನದ ಮಧ್ಯಭಾಗದಲ್ಲಿ ಜೀವಿಸುತ್ತಿದ್ದಂತೆ ಆತನ ಗ್ರಂಥಗಳಿಂದಲೇ ತಿಳಿದುಬರುವುದು. ಅವನ ಹೃದಯಂಗಮವಾದ "ಚಾರುಚರ್ಯೆ" ಯೆಂಬ ಗ್ರಂಥದ ಯೋಗ್ಯತೆಗೆ ಮನಸೋತು—"ನಮ್ಮ ವಾಙ್ಮ

ಯಕ್ಕೆ ಅದರ ಅಲ್ಪ ಪರಿಚಯವನ್ನಾದರೂ ಒದಗಿಸಿ ಕೊಡುವುದು ಒಳ್ಳೆಯದು ” ಎಂದು ಹೀಗೆ ಸಾಹಸವಾಡಿದೆನು.

ಮುಂಜಾನೆ ಎದ್ದವರು ತಮ್ಮ ಕಾರ್ಯಗಳಲ್ಲಿ ಹೇಗೆ ಮುಂದುವರಿಯುತ್ತಿರಬೇಕು ಎಂದು ತಿಳಿಸುವ ರೀತಿಯು ಆಬಾಲವೃದ್ಧರೂ ತಿಳಕೊಳ್ಳುವ ಹಾಗೆ ತಿಳಿಯಾಗಿರುವುದೊಳ್ಳೆಯದು ಎಂಬ ಭಾವನೆಯಿಂದ ಈ ಅಳಿಲಸೇವೆಯನ್ನು ಕರ್ಣಾಮೃತವಾಗಿರಲೆಂಬ ಹಾರೈಕೆಯೊಡನೆ ಕನ್ನಡಿಗರಿಗೆ ಸಮರ್ಪಿಸುವ

ಸಜ್ಜನ ವಿಧೇಯ

**ಮೊಳೆಯಾರು, ಶಂಕರನಾರಾಯಣಭಟ್ಟ.**

——ശ്രീ——

# — ಕರ್ಣಾಮೃತ —



ಸಿರಿಯಿಂ ಸುಭಗನು ಸತ್ಯಾಸಕ್ತನು
ವರದನು ಮೋಕ್ಷದನಖಿಲಸ್ತುತ್ಯನು ।
ಮೆರೆವ ಸುಶೀಲನು ತಾನಚ್ಯುತನೆನೆ
ಪೊರೆವನು ಸಾತ್ವಿಕನಾಗಿಯೆ ಜಗವನು ॥ ೧ ॥

ಶ್ರೀರಾಮಾರಮಣೀಯನಿವಾಸಂ
ಕ್ಷೀರಾರ್ಣವಮಥನೋದ್ಭವಮಹಿಮಂ ।
ನಾರಾಯಣನೆನೆ ಕರ್ಣಾಮೃತಮುಂ
ಪಾರಾಯಣಪರರನು ಬೆಂಬಿಡದು ॥ ೨ ॥

ಆಲಸ್ಯದೊಳೊರಗದೆ ಮುಂಜಾವದ
ಕಾಲದೊಳೇಳುತ್ತಿರಬೇಕೆಂದಿಗು ।
ಲೀಲೆಯೊಳರಳುವ ಸರಸಿಜವನು ಪ-
ದ್ಮಾಲಯೆ ಪುಗುವುದು ಗುಣಕೊಲಿದಲ್ಲವೆ? ॥ ೩ ॥

ಅನುದಿನ ವೇಳೆಗೆ ಜಳಕವಗೆಯ್ದು
ತನುಮನಗಳ ಪರಿಶುದ್ಧಿಯನೊಂದು ।
ಮುನಿಯುತ ವೃತ್ರನ ವಧಿಸಿದ ಪಾಪವ
ನನಿತನು ಸುರಪನು ಮಿಯುತ ತೊಳೆಯನೆ? ॥ ೪ ॥

ಆವುದೆ ಕಾರ್ಯವನೆಸಗುವ ಮುನ್ನ
ದೇವರನರ್ಚಿಸು ಗುಣಸಂಪನ್ನ ।
ದೇವರನರ್ಚಿಸುತಿದ್ದಾಶ್ವೇತನಿ
ಗಾವನೊ ಸರಿ ಯಮನಂಜಿದನಲ್ಲವೆ ॥ ೫ ॥

ವಿಧ್ಯುಕ್ತಕ್ರಮದೊಳೆ ಪಿತೃಗಳ್ಗೆ
ಶ್ರಾದ್ಧವನೆಸಗೆಲೊ ಶ್ರದ್ಧಾವಂತನೆ ।
ಬುದ್ಧಿಯೊಳಸದೃಶನೆನಿಸಿದ ಭೀಷ್ಮನು
ಶ್ರಾದ್ಧದ ಪಿಂಡವನೀಯನೆ ತಂದೆಗೆ? ॥ ೬ ॥

ಮಲಗುತ ಬಡಗಣ ಪಡುವಣ ದಿಕ್ಕಿಗೆ
ತಲೆಯಿಡಬಾರದು! ಬಡಗಣ ದಿಕ್ಕಿಗೆ ।
ಮಲಗಿದ ದಿತಿಗರ್ಭವ ಸಂಹರಿಸಿದ
ಕಲುಷಕಪಾತ್ರನು ಗಡ ಪುರುಹೂತನು ॥ ೭ ॥

ಅತಿಥಿಗಳನು ಮೊದಲುಣ್ಣಿಸಬೇಕು
ಮತಿವಂತನು ಮಿಕ್ಕುದನುಣಬೇಕು ।
ಅತಿಥಿಗಳಿಲ್ಲದೆ ಭೋಜನವೆಸಗಿದ
ಶ್ವೇತನು ನಿಜಮಾಂಸಾಶನನಾದನು ॥ ೮ ॥

ಗೆಳೆಯನೆ ಕಾಲ್ಗಳನತಿಶುಚಿಯಾಗಿ
ತೊಳೆಯುತ್ತೆ ಜಪಹೋಮಾರ್ಚನೆಯೆಸಗು ।
ತೊಳೆಯದ ನಳಭೂಜಾನಿಯ ಪದಗಳ
ನೊಳಪೊಕ್ಕಲೆ ಕಲಿ ಗೋಳಾಡಿಸಿದುದು ॥ ೯ ॥

ಕತ್ತಲೆಯುಡಸಿರೆ ನಿಸ್ಸಂದೇಹದ
ಚಿತ್ತದೊಳೆತ್ತಲು ಚರಿಸಲು ಬಾರದು ।
ಉತ್ತಮಮಾಂಡವ್ಯನು ಚೋರರ ಬೆಂ
ಬತ್ತಿದ ದೂತರ ಶೂಲಕೆ ಗುರಿಯು ॥ ೧೦ ॥

ಪರನಾರಿಯರನು ಮೆಚ್ಚದಿರು! ಮ-
ತ್ತರಿವುಳ್ಳೊಡೆ ನಚ್ಚದಿರಬಲೆಯರನು ।
ಧರಣಿಜೆಗೆಳಸಿದ ರಾವಣನಳಿದನು
ನಾರಿಯ ನಂಬಿ ವಿದೂರಥನಳಿದನು ॥ ೧೧ ॥

ಸಲ್ಲದ ಪೈಶಾಚಿಗಳಪ್ಪುದರಿಂ
ಪೊಲ್ಲದ ಮದಿರೆಯನೀಂಟಲೆ ಬಾರದು ।
ಉಲ್ಲಾಸಕ್ಕೆನಲೀಂಟಿದವೃಷ್ಣಿಗ
ಳೆಲ್ಲಾ ಬಡಿದಾಡಲು ಕುಲವಳಿಯಿತು ॥ ೧೨ ॥

ಶಾಂತಿಯೆ ಸಂಪತ್ತಿಗೆ ಕಾರಣವ-
ಕ್ಶಾಂತಿಯೆ ಕಲಹಕೆ ಮೂಲವೆನಲ್ಕ- ।
ಕ್ಶಾಂತಿಯ ದೋಷದೆ ಜನಮೇಜಯಭೂ
ಕಾಂತನು ಗಾರ್ಗ್ಯನ ಶಾಪವನಾಂತನು ॥ ೧೩ ॥

ನರನತಿಸಂಕಷ್ಟದೊಳೂ ಧರ್ಮದ
ಮೇರೆಯ ಮೀರಲು ಬಾರದು ಧರ್ಮವ ।
ಪೊರೆಯೆ ಹರಿಶ್ಚಂದ್ರನು ಚಂಡಾಲನಿ
ಗರಿತೂ ಸೇವೆಯನೆಸಗಿದನಲ್ಲವೆ? ॥ ೧೪ ॥

ಮತಿವಂತನು ಸತ್ಯವ್ರತಭಂಗದೊ
ಳೆಂತೂ ಕಾರ್ಯವ ಸಾಧಿಸಬಾರದು ।
ಕೈತವವಾದದೆ ಯಮಜನಿಗಾದ-
ತ್ತ್ಯತಿಸಂಕಷ್ಟದ ನರಕದ ದೃಶ್ಯವು ॥ ೧೫ ॥

ಗುಣಿಗಳ ಸಂಗವ ಸಂಪಾದಿಸಿ ದು-
ರ್ಗುಣಿಗಳನೊಡಗೂಡದೆ ಜೀವಿಸುವುದು ।
ಗುಣವಂತನ ರಾಮನನೊಡಗೂಡಿದ
ಗುಣದಿಂದ ವಿಭೀಷಣನರಸಾದನು ॥ ೧೬ ॥

ಜನನೀಜನಕರನತಿವಿಶ್ವಾಸದೆ
ತನಜನು ಸೇವಿಸಿ ಮುದಗೊಳಿಸುವುದು ।
ಜನನೀಶಾಪದ ಮೂಲಕವಾದುದು
ಜನಮೇಜಯಯಾಗದ ಪನ್ನಗವಧೆ ॥ ೧೭ ॥

ರಾಜಿಪ ಯೌವನದಾನದೆ ಜರೆಯನು
ಮೂಜಗವರಿಯಲು ಧರಿಸಿದ ಕಿರಿಯನು ।
ರಾಜಯಯಾತಿಯನುಗ್ರಹದಿಂದಲೆ
ನಿಜಸಾಮ್ರಾಜ್ಯದ ಪಟ್ಟವನೇರ್ದನು ॥ ೧೮ ॥

ಇತಿಮಿತಿಯರಿತೊಲವಿಂ ಕೊಡಬೇಕು
ಮತಿವಂತನು ಕೊಟ್ಟಳದಿರಬೇಕು ।
ಇತ್ತ ಬಳಿಕವೇ ಚಿತ್ತದ ಶುದ್ಧಿಗೆ
ದೈತೇಯನು ಬಲಿಯಾತ್ಮವನಿತ್ತನು ॥ ೧೯ ॥

ದಾನಿಯು ಪ್ರತ್ಯುಪಕಾರವನೊಲ್ಲದ
ದಾನವನೀವುದು ಸಾತ್ವಿಕವೆನಿಪುದು ।
ನೆನಸುತ್ತಿಂದ್ರನ ಶಕ್ತಿಯನಾಂತವ
ನಿನಜನು ಕುಂಡಲದಾನದೆ ಕಲುಷನು ॥ ೨೦ ॥

ವಿಪ್ರರನೆಂದಿಗು ಪರಿಭವಿಸದಿರು!
ವಿಪ್ರರ ಶಾಪವು ದುಸ್ಸಹವಪ್ಪುದು!
ವಿಪ್ರನು ಶಪಿಸೆ ಪರೀಕ್ಷಿತನೆಂತೂ
ಕ್ಷಿಪ್ರದೆ ತಕ್ಷಕವಿಷದಿಂದಳಿದನು ॥ ೨೧ ॥

ಸೋಗಿನ ಧರ್ಮಾಚರಣೆಯ ಗರ್ವವು
ಸಾಗದು ಕೊನೆಗದು ನಿಷ್ಫಲವಹುದು ।
ಸೋಗಿನ ಕರ್ಣನ ಶಸ್ತ್ರಾಭ್ಯಾಸವು
ಸಾಗದೆ ಸುಮ್ಮನೆ ಗತಿಗೇಡಾದುದು ॥ ೨೨ ॥

ಐಸಿರಿಯಾಸೆಯ ದುರ್ಜನಸೇವೆಗೆ
ಬಸವಳಿವೆಯ? ಸಿರಿ ದೈವಾಧೀನವು ।
ವಸುಧೇಶ್ವರದುರ್ಯೋಧನಸೇವೆಗೆ
ಅಸುಗಳೆದರಲೇ ಭೀಷ್ಮದ್ರೋಣರು ॥ ೨೩ ॥

ಪರರಸುವನು ಪರಿಪಾಲಿಸುವಾತನು
ಕರುಣಾವಂತನೆ! ಆಗಿರಬೇಕು ।
ಪೊರೆಯೆ ಕಪೋತವ ಗೃಧ್ರಕೆ ಶಿಬಿಯು
ಕರುಣೆಯೊಳೀಯನೆ ನಿಜಮಾಂಸವನು ॥ ೨೪ ॥

ಕೋಪದ ಬೆಂಕಿಗೆ ಬಾಡದ ತೆರದೊಳು
ಕಾಪಿಡು ನೀ ಸುಮಕೋಮಲಮನವನು ।
ಕೋಪದ ಕಿಡಿಯೇ ಧಗಧಗಿಸಿದ ಸಂ–
ತಾಪಕೆ ದೇವಾಸುರಬಲವಳಿಯಿತು ॥ ೨೫ ॥

ಕೃತಜ್ಞನಾಗಿರಬೇಕೆಂದೆಂದೂ
ಕೃತಘ್ನತೆಯೆಂಬುದು ನರಕದ ಮೂಲ ।
ಘಾತಿಸುತುಪಕೃತಿನಾಡೀಜಂಘನ
ಗೌತಮನಿಳಿಯನೆ ರೌರವನರಕಕೆ ॥ ೨೬ ॥

ನಾರಿಯ ಮೋಹಕೆ ತನ್ನನೆ ಮಾರಲು
ಬಾರದು ಮುನ್ನೋಟದ ಮತಿವಂತನು ।
ನಾರಿಯ ಮೋಹಕೆ ದಶರಥನಾತ್ಮವ
ಮಾರುತೆ ಪುತ್ರವಿಯೋಗದೊಳಳಿದನು ॥ ೨೭ ॥

ತನ್ನನು ತಾನೇ ಹೊಗಳಲು ಬೇಡ!
ಉನ್ನತಗುಣಗಳ ಕೆಡಿಸಲು ಬೇಡ! ।
ತನ್ನನು ತಾನೇ ಹೊಗಳಿ ಯಯಾತಿ
ಉನ್ನತ ನಾಕದೆ ಕೆಡೆದುದನರಿಯ? ॥ ೨೮ ॥

ಪೊಲ್ಲದ ಮೃಗಯಾವ್ಯಸನವು ಬೇಡ!
ಕೊಲ್ಲುವ ಬೇಟೆಯು ಕೇಡಿನ ಬೀಡು– ।
ಬಲ್ಲಿದ ಪಾಂಡುವು ಬೇಟೆಯನಾಡು
ತ್ತಲ್ಲಿಯ ಮುನಿಶಾಪಕ್ಕೀಡಾದನು ॥ ೨೯ ॥

ಕ್ರೂರತೆಯಿಂ ಬಲು ಬೇಗನೆ ಮರ್ಮವಿ
ದಾರಣೆಯಪ್ಪಂತುಸುರಲು ಬಾರದು! ।
ಕೌರವವಾಕ್ಪಾರುಷ್ಯದ ಹತಿಗೆ
ಮಾರುತಿ ಸಹಿಸದೆ ಕುಲವನೆ ಕೊಂದನು ॥ ೩೦ ॥

ದೊರೆಗತಿಹಿತವನು ಮಾಡುವೆನೆಂದು
ಪರರನು ಪೀಡಿಪ ಚಾಡಿಯು ಬೇಡ ।
ಅರುಹಿದ ಚಂದ್ರಾರ್ಕರನೆಂದೆಂದಿಗು
ತೊರೆವನೆ ರಾಹುವು ಚಾಡಿಯ ನೆವದೆ ॥ ೩೧ ॥

ಬೇಡುವುದಾಗದು ಮಾನಕೆ ಕೊರತೆ
ಮಾಡಲು ಬಾರದು ನೀಚರ ಕೆಲಸ ।
ನೀಡುವ ಬಲಿಯನು ಪ್ರಭು ಬೇಡಿದನೆಂ
ದಾಡುವರೆನೆ ಹರಿ ವಾಮನನಾದನು ॥ ೩೨ ॥

ವಾದದೊಳುತ್ತಮರನು ಗೆಲೆ ಮರ್ಮವಿ
ಭೇದಕವಚನಗಳಿಂದಿರಿಯದಿರು ।
ವೇದದ ವಾದದೆ ಮೆರೆದಾ ವಿಧಿಯನ
ನಾದರದಿಂ ತಲೆಗಡಿಯನೆ ಹರನು! ॥ ೩೩ ॥

ಬಂಧುಗಳೆನ್ನದೆ ಬಾಂಧವರೆನದೇ
ಒಂದೇ ವಿಧದಿಂದೆಲ್ಲರನರ್ಚಿಸು ।
ಅಂಧಕರಿಪುವವಮಾನಿತನಾದುದ
ರಿಂದಲೆ ದಕ್ಷನ ಯಾಗಧ್ವಂಸವು ॥ ೩೪ ॥

ಪರರನು ವಾದಿಸಿ ಸಿಟ್ಟೆಬ್ಬಿಸದಿರು!
ಪರವಾದದ ಮದವೇ ಗತಿಗೇಡು! ।
ಬಿರುನುಡಿಯನು ಕೇಳುತ್ತಿರಲಾರದೆ
ಹರಿ ಶಿಶುಪಾಲನ ತಲೆಗಡಿದನಲೆ ॥ ೩೫ ॥

ಅರಿತು ಮಹಾತ್ಮರ ಗುಣಗಣಗಳನೇ
ನೆರೆವರ್ಣಿಸಿ ಪ್ರೋತ್ಸಾಹಿಸಬೇಕು! ।
ನೆರವಿಯ ಹೊಗಳಿಕೆಯಿಂದಲೆ ಹನುಮನು
ಧರಣಿಜೆಯನು ಸಂಶೋಧಿಸಿ ಬಂದನು ॥ ೩೬ ॥

ಜ್ಞಾನದ ಗುಣವನು ಪೂಜಿಸು ಬ್ರಹ್ಮ-
ಜ್ಞಾನಿಯೆ ಬ್ರಾಹ್ಮಣನೆನೆ ಪೂಜಾರ್ಹನು ।
ಜ್ಞಾನದೆ ಬ್ರಾಹ್ಮಣನಾವಿದುರನು ಮ
ಜ್ಞಾನದಿನಶ್ವತ್ಥಾಮನೆ ಶೂದ್ರನು ॥ ೩೭ ॥

ಕೊಡಬೇಕೆಂದಡಿಗಡಿಗೂ ದಾನಿಯು
ಪೀಡಿಸಲವನೂ ಕಡುಮುಳಿಯುವನು ।
ಕಡೆಯುತ ಪಾಲ್ಗಡಲಿಂದಲೆ ಸಿರಿಯನು
ಪಡೆದೂ ಕಡೆಯಲು ವಿಷವೇ ಬಂದುದು ॥ ೩೮ ॥

ಕುಟಿಲತೆ ಲೋಭಂ ಕ್ರೂರತೆಯೆಂಬಿವು
ಜಟಿಲತೆಯಿಂದಿರ್ಪವರನು ವರ್ಜಿಸು ।
ಬೇಟೆಯ ಕೌಶಿಕನಾಮುನಿವರಾನಿತ
ನಾಟಿಸಿ ಯಜ್ಞದ ಧೇನುವನೊಯ್ದನು ॥ ೩೯ ॥

ಉಗ್ರತಪಸ್ವಿಗಳಾದರದೇನು!
ವ್ಯಗ್ರದೊಳಿಂದ್ರಿಯತತಿಯಿರ್ಪುದನರಿ ।
ಉಗ್ರತಪಸ್ವಿಗೆ ಸಂದೂ ಗಾಧಿಜ
ನಾಗ್ರಹದಿಂ ವರಿಸನೆ ಮೇನಕೆಯನು ॥ ೪೦ ॥

ಅಗಲಿಕೆಯೊದಗಲು ದೈನ್ಯವ ತೊರೆದು
ಮಿಗಿಲಾಗಿಯೆ ಧೈರ್ಯವ ಪಡಬೇಕು ।
ಮಗನಳಿವನು ಕೇಳುತ್ತಲೆ ದ್ರೋಣನು
ಬಗೆಯದೆ ಧೈರ್ಯವ ದೈನ್ಯದೊಳಳಿದನು ॥ ೪೧ ॥

ಕೋಪದ ರಾಕ್ಷಸನನು ಪರಿಹರಿಸು!
ಕೋಪದಿನಪವಾದವು ಬಂದಪುದು ।
ಕುಪಿತಂ ಮಾರುತಿ ರಾಕ್ಷಸನಂತೆಯೆ
ರಿಪುವಕ್ಷದ ಕೆನ್ನೆತ್ತ್ವರ್ಗುಡಿದನು ॥ ೪೨ ॥

ದೇವರನೊಲಿಸುವ ಭರದಿಂ ತನ್ನಯ
ಸಾವಿನ ಕಾರಣವನು ಬಯುಸದಿರು ।
ದೇವರನೊಲಿಸಿದ ಬಾಣನು ಬಯುಸಿ
ಸಾವಿನ ಮೂಲದ ರಣದಿಂದಳಿದನು ॥ ೪೩ ॥

ಗುರುಸೇವಾತುರನಾಗುತೆ ಕಷ್ಟವ
ಪರಿಗಣಿಸದೆಯೇ ವಿದ್ಯೆಯನಾರ್ಜಿಸು ।
ಗುರುಸೇವಾರತನಾಗಿಯೆ ಬನ್ನವ
ಪರಿಗಣಿಸದೆ ಕಚನಭ್ಯಾಸಿಸಿದನು ॥ ೪೪ ॥

ಅತಿಭಕ್ತರು ಶಕ್ತರು ನಿರ್ದುಷ್ಟರು
ಹಿತರನುರಕ್ತರೆನಿಪ್ಪರ ಬಿಡದಿರು ।
ಸತಿಯನು ಸೀತೆಯ ನುಳಿಯುತೆ ರಾಮನು
ಮಿತಿಯಿಲ್ಲದ ಶೋಕದೊಳಳವಳಿದನು ॥ ೪೫ ॥

ಅಳಿದರೆ ಮತ್ತೂ ಕೀರ್ತಿಶರೀರದೊ
ಳುಳಿವಂತೆಯೆ ನೀನಾಚರಿಸುತ್ತಿರು ।
ತಳಮುಳಿಸಿದ ಜನರಾಗ್ರಹದಿಂದಲೆ
ಉಳಿದನು ನಾಕದೊಳಿಂದ್ರದ್ಯುಮ್ನನು ॥ ೪೬ ॥

ಚಪಲತೆಯಿಂದೋಡುವ ಸಂಪತ್ತನು
ಕೃಪಣತೆಯಿಂ ಸಂರಕ್ಷಿಸಬಾರದು ।
ಉಪಚಿತನಂದೈಶ್ವರ್ಯವ ಯುಕ್ತಿಯೊ
ಳಪಹರಿಸಿದರಾವ್ಯಾಡೀದತ್ತರು ॥ ೪೭ ॥

ಬಲಗರ್ವಿತನತಿಬಲನನು ಗೆಲನು
ಬಲಗುಂದಲು ಸಹಿಸುವುದೇ ಮೇಲು ।
ಬಲಗರ್ವಿತಲಂಕೇಶ್ವರನನು ಭುಜ
ಬಲದಿಂ ಕೃತವೀರ್ಯಸುತಂ ಗೆಲ್ದನು ॥ ೪೮ ॥

ಗಣನೆಗೆ ಸಿಲುಕದ ಸುಳ್ಳಿನ ಕಂತೆಯು
ಗಣಿಕಾವಚನವ ನಂಬುತ ಕೆಡದಿರು ।
ಗಣಸೀಯನನಾ ಕೋಡಿನ ಮುನಿಯನೆ
ಗಣಿಕೆಯರೊಲವಿಂ ನಾಡಿಂಗೆಳೆದರು ॥ ೪೯ ॥

ಕೆಡಹುವ ಶಕ್ತಿಯು ತನ್ನಲ್ಲಿರಲೂ
ಕೆಡೆನುಡಿದವನಾನಿಸದಿರು ವೈರಿಯ ।
ಕೊಡಲಿಯ ರಾಮನನಾ ರಘುರಾಮನು
ಕೆಡೆನುಡಿಯುದೆ ದಯೆಯಿಂದಲೆ ಬಿಟ್ಟನು ॥ ೫೦ ॥

ಹುಡುಗನು ನಾನಿಹೆನೆಂದೆಣಿಸದಿರು
ಕಡುದರ್ಪದೊಳಿದ್ದವನನು ಬಿಡದಿರು ।
ಪೊಡವಿಯ ಗೆದ್ದ ಜರಾಸಂಧನನೇ
ಸಿಡಿದೆಳೆದೆರಡಾಗಿಸಿದನು ಭೀಮನು ॥ ೫೧ ॥

ಗೆಲವನು ಸಾಧಿಸಿಕೊಳ್ಳಲು ಧರ್ಮದ
ನೆಲೆಯನು ಕೆಡಿಸುವ ನಡತೆಯದಾಗದು ।
ಬಲಶಾಲಿಯ ವಾಲಿಯ ಕಾಪಟ್ಯದ
ಕೊಲೆಯಿಂ ರಾಮನ ಕೀರ್ತಿಗೆ ಕರೆಯು! ॥ ೫೨ ॥

ಪರಯುವತಿಯಿರಲ್ವಿಜನಸ್ಥಳವನು
ತೊರೆಯಲುಬೇಕಿಂದ್ರಿಯಜಯಿಯಾದರು ।
ಅರಿತೂ ರತಿ ಸಲಹಿದ ಪ್ರದ್ಯುಮ್ನನ
ನೆರೆ ಕಾಮಿಸಿದಳು ಶಂಬರನಲ್ಲಿ ॥ ೫೩ ॥

ಉಗ್ರತಪಸ್ವಿಯ ಚಿತ್ತಸ್ಥೈರ್ಯವ
ನಾಗ್ರಹದಿಂ ಕೆಡಿಸುವ ಮನಬೇಡ ।
ಉಗ್ರನ ತಪವನು ಕೆಡಿಸಲು ದರ್ಪಕ
ನಾಗ್ರಹದಿಂ ಪೋಗುತ್ತೊಡಲಳಿದನು ॥ ೫೪ ॥

ಸಂತತಕಲಹಕ್ಕಾಸ್ಪದವಾದ ದು–
ರಂತದ್ಯೂತವನೆಣಿಸಲೆ ಬಾರದು ।
ಅಂತಿಕದೊಳೆ ಕುಳಿತಾಡಿದ ರುಕ್ಮಿಯು
ನಂತಕನೆನೆ ಬಲಭದ್ರನೆ ಕೊಂದನು ॥ ೫೫ ॥

ಜನಪನ ಮೊಗದೊಳು ಮಿಂಚಿನ ತೆರದೊಳು
ಮಿನುಗುವ ನಗುವನು ನಂಬಲೆ ಬಾರದು ।
ಅನಿತೂ ನಚ್ಚಿದ ಶಕಟಾಲನನೇ
ಜನಪತಿನಂದನು ಬಾವಿಗೆ ತಳ್ಳನೆ? ॥ ೫೬ ॥

ಜನರೊಳು ನಾಸ್ತಿಕವಾದವ ಹೂಡದೆ
ಮನದೊಳು ಚಿನುಮಯನನೆ ಭಾವಿಸುತಿರು ।
ದನುಜಹಿರಣ್ಯಕಶಿಪುವನು ವಾದದ
ಮುನಿಸಿಂದಲೆ ನರಹರಿ ಘಾತಿಸಿದನು ॥ ೫೭ ॥

ಪದವಿಯನೈದುತೆ ಮಹನೀಯರನತಿ
ಮದದಿಂ ಪರಿಭವಿಸಿದ ಫಲ ತಪ್ಪದು ।
ತ್ರಿದಶಾಧಿಪನಾದಾನಹುಷನು ಸ–
ರ್ಪದರೂಪಾದನಗಸ್ತ್ಯನ ಶಾಪದೆ ॥ ೫೮ ॥

ವೈರಿಗಳೊಡನೊಡರಿಸಿ ಸಂಧಿಯನಾ
ವೈರದ ಪರಿಯನೆ ಮರೆತಿರಲಾಗದು ।
ವೈರದ ವೃತ್ರನ ಸಂಧಿಯ ಸಾಧಿಸಿ
ವೀರುತ್ತವನನೆ ವಧಿಸನೆ ವಜ್ರಿಯು ॥ ೫೯ ॥

ಪೇಳುವ ನೀತಿಗೆ ಕಿವಿಗೊಡಬೇಕು!
ಕೇಳಿದ ತೆರದೊಳೆ ನಡೆಯಲು ಬೇಕು ।
ಪೇಳಿದ ವಿದುರನ ನೀತಿಯನಂತೆಯೆ
ಕೇಳುತೆ ನಡೆಯದ ಕುರುಪತಿಯಳಿದನು　　॥ ೬೦ ॥

ಮಿತದಾರೋಗಣೆ ರೋಗಿಗೆ ಹಿತವು
ಮಿತಿಮೀರಲದೇ ಅರುಚಿಗೆ ಹೇತುವು ।
ಮಿತಿಮೀರುತ್ತಾಜ್ಯವನುಂಡುಂಡಾ
ಕತದಿಂ ವಹ್ನಿಗೆ ಬಂದುದು ಜಾಡ್ಯವು　　॥ ೬೧ ॥

ತಪದಿಂ ತನುವನು ಶೋಷಿಸದೆಯೆ ನೀ
ನುಪತಾಪಾದಿಗಳನೆ ದಂಡಿಸುತಿರು ।
ತಪದಿಂ ರಾವಣನನುಜನು ನಿದ್ರೆಯ
ನುಪಗಮಿಸುತ್ತಪಮೃತಿಗೀಡಾದನು　　॥ ೬೨ ॥

ಭವವನು ಶಾಶ್ವತವೆಂದೆಣಿಸದಿರು
ಭವನಾಟಕವಿದು ಕ್ಷಣಭಂಗುರವು ।
ಭುವನವೆ ಕೊಂಡಾಡಿದ ನಳರಘುಭಾ-
ರ್ಗವಶಿಬಿಪಾಂಡುಗಳೆಲ್ಲಿದರೀಗ　　॥ ೬೩ ॥

ಎಂದೆಂದಿಗು ವೃದ್ಧರ ನಡೆನುಡಿಗಳ
ನಿಂದಿಸುತೇಡಿಸಬಾರದು! ಲಕ್ಷ್ಮಿಯು ।
ಕಂದನು ವೃದ್ಧವಿಡಂಬನೆಯಿಂದಲೆ
ಹೊಂದಿದನಲೆ ವೈರೂಪ್ಯದ ತನುವನು　　॥ ೬೪ ॥

ಉಪದೇಶಗಳಿಂ ಮೂರ್ಖರನುಳಿಸುವ
ವಿಪರೀತಕೆ ಸಾಹಸವೇ ನೀತಿಯು ।
ನಿಪುಣನು ಭೃಗು ದೈತ್ಯರ ಸಂತಾನವ
ನುಪದೇಶಿಸಿಯೂ ಸಂರಕ್ಷಿಸಿದನೆ?　　॥ ೬೫ ॥

ಬಂದವರನು ಪರಿಭವಗೊಳಿಸದೆ ನೀ
ನೆಂದೂ ಸೇಡಿಗೆ ಗುರಿಯಾಗದಿರು ।
ನಂದನು ಚಾಣಕ್ಯನ ಕೋಪಾನಲ
ದಿಂದಲೆ ಸಪ್ತದಿನಂಗಳೊಳಳಿದನು ॥ ೬೬ ॥

ಮತಿವಂತನೆ ಮುಂಗತಿಯನು ನಿರುಕಿಸಿ
ಸತಿಯರ ತಪದುರಿಯನು ಕೆಣಕದಿರು ।
ಮತಿಗುಂದಿದ ದಶಕಂಠನು ವೇದಾ
ವತಿಯನು ಮೃತಿಗಾಗಿಯೆ ತುಡುಕಿದನು ॥ ೬೭ ॥

ಗುರುಸೇವೆಯ ನೀನತಿವಿಶ್ವಾಸದೆ
ನೆರವೇರಿಸು ವಿದ್ಯೆಗೆ ಮೂಲವದು ।
ಗುರುವಿಶ್ವಾಮಿತ್ರನು ಸಂತೋಷದೆ
ಶರಮಂಡಲವನೆ ರಾಮನಿಗಿತ್ತನು ॥ ೬೮ ॥

ಕೊಡಲೊಲ್ಲದೆ ಗಳಿಸಿದ ವಿತ್ತವನು
ಕಡುವೈರಿಗಳಪಹರಿಸುವರೆಂದೂ ।
ಕೊಡಲಾರದ ದ್ರುಪದನ ಸಂಪತ್ತು
ಕೆಡದುಳಿದುದೆ ದ್ರೋಣನ ಕೋಪಾಗ್ನಿಗೆ ॥ ೬೯ ॥

ಒಂದಕ್ಕೊಂದರ ನೆರವಪ್ಪಂತಿರೆ
ಚೆಂದದೆ ವರ್ಗತ್ರಯವನು ಕಾಪಿಡು ।
ಹಿಂದಣ ಸಗರಾದಿಧರಾಧೀಶ್ವರ
ರೊಂದಾಗಿಸರೇ ವರ್ಗತ್ರಯವನು? ॥ ೭೦ ॥

ವಂಶದೊಳವನತನಾಗಿರ ಬಾರದು
ವಂಶದೊಳಧಿಕನೊ ಸಮನೋ ಆಗಿರು ।
ಅಂಶುಮಾಲಿಪರಂಪರೆಯಲ್ಲಿ
ವಂಶಾಧಿಕನೆನೆ ರಾಮನು ಮೆರೆದನು ॥ ೭೧ ॥

ಪವಿತ್ರತೀರ್ಥಸ್ನಾನವನೆಸಗು
ಭವವನು ಬೆಳಗುವ ಪುಣ್ಯವ ಗಳಿಸು ।
ಭವವಿದಲೋಮಶನೆಂದುದನೆಸಗಿ
ಭುವನಖ್ಯಾತರು ಪಾಂಡವರಾದರು ॥ ೭೨ ॥

ಕುಶಲದ ಕಲೆಯನು ತಿಳಿದಿರಬೇಕು!
ವಶಗೊಳಿಸುವುದದು ಶಕ್ತರ ನೆರವನು ।
ಕುಶಲದ ನಾಟ್ಯವೆ ಕೌಂತೇಯಂಗೂ-
ರ್ವಶಿ ಶಾಪಿಸೆ ಪರಿಹಾರಕ್ಕೊದಗಿತು ॥ ೭೩ ॥

ಅನುರಾಗದ ಸುಖದುಃಖಗಳನು ಬಗೆ
ಗನುಗೊಳಿಸದೆ ಶಾಂತತೆಯಿಂ ಜೀವಿಸು ।
ನನೆಯದೆ ನೀರಿನ ತಾವರೆಯಂದದೆ
ಜನಕನು ರಾಜ್ಯವನನುಭವಿಸಿರನೆ? ॥ ೭೪ ॥

ಗುರು ಬಹುವಿತ್ತದ ಲಾಭದೊಳಾದರು
ತೊರೆವುದು ದುರ್ಜನರಾಗಿಹ ಶಿಷ್ಯರ ।
ಗುರು ಸಂವರ್ತನ ಯಜ್ಞವಬಯಸಿ
ಗುರಿಯಾದನಲೇ ಗೌರವಹಾನಿಗೆ ॥ ೭೫ ॥

ಬಿಡದನುರಾಗಿಪಳೆಂದಿರದೊಡನೆ
ಬಿಡುವುದು ಕಿಡುನಡತೆಯ ಕಾಮಿನಿಯನು ।
ಉಡುಪತಿಯನು ಬಯಸಿದ ನಿಜಪತ್ನಿಯ
ನೊಡನರಿತು ಪರಿತ್ಯಜಿಸನೆ ಗುರುವು ॥ ೭೬ ॥

ವಾದನಕೀರ್ತನಗಳ ಗೊಡವೆಯನೇ
ವಾದಿಪುದೆಂಬ ವ್ಯಸನವು ಬೇಡ!
ವಾದನಲೋಲನು ವತ್ಸನು ರಿಪುವಶ
ವಾದನು ವೀಣಾವ್ಯಸನನಿಮಿತ್ತದೆ ॥ ೭೭ ॥

ಸುಮಕೋಮಲಸುಂದರಿಯುರನೆಂದಿಗು
ಭ್ರಮೆಗೊಳಿಸಲು ಬಾರದು ಕಾಠಿಣ್ಯದೆ ।
ರಮಣಿಗೆ ಭಯವಾಗುವುದೆಂದರಿತು
ದ್ಯುಮಣಿಯು ಖರಕರವಡಗಿಸಿ ಪೋಗನೆ? ॥ ೭೮ ॥

ತಾವರೆಯಂದದೆ ತುಂಬಿದ ಕೋಶವ
ನಾವರಿಸುವ ಬಂಡುಣಿಗೀಯುದಿರು ।
ಭಾವನೆಯುಳಿದೆಲ್ಲವನಂದಂಬುಧಿ
ದೇವತೆಗಳಿಗಿತ್ತಾದುದು ಬರಿದು ॥ ೭೯ ॥

ಮರೆತರೆ ಕೇಳ್ದುಪದೇಶಾಮೃತವನು
ಬರಿದಹ ಕಷ್ಟವು ಸೋರುವ ಕೊಡವೆನೆ ।
ವರಗೀತಾರ್ಥವ ಮರೆತುದರಿಂದಲೆ
ನರನಲೆದಾಡಿದನಲೆ ರಣರಂಗದಿ ॥ ೮೦ ॥

ತಂದೆಯು ತಾನೇ ಧನದಧಿಕಾರವ
ಕಂದನ ಕೈಗೊಪ್ಪಿಸುತಿರಬಾರದು ।
ಅಂಧನೃಪತಿದುರ್ಯೋಧನಗೊಪ್ಪಿಸಿ
ತಂದನಲೇ ಸರ್ವಸ್ವವಿನಾಶವ ॥ ೮೧ ॥

ವೈರವು ನೆಲಸಿದ ಜನರೊಳು ಕಾರ್ಯದ
ಭಾರವನೆಂದೂ ಹೊರಿಸಲು ಬಾರದು ।
ಸಾರಥಿಶಲ್ಯನ ತೇಜೋವಧೆಗೆ
ಸೂರಜನುಮ್ಮಳಿಸುತ್ತಲೆ ಕೆಟ್ಟನು ॥ ೮೨ ॥

ಒಡೆಯನು ತಾನೊಲಿದಿರೆ ಮನದೊಳಗೆ
ಚಡಪಡಿಸಲು ಬಾರದು ಫಲಕಾಗಿ ।
ಮೃಡನೊಲವಿಂ ತಲೆಯೊಳು ಸೂಡಿದರೂ
ಬಿಡುವನೆ ಕೃಷತೆಯ ಮರುಕವನುಡುಪನು ॥ ೮೩ ॥

ವೈದಿಕಧಾರ್ಮಿಕದಾಚಾರಂಗಳ
ನಾದರಿಸುತ್ತಿರಬೇಕೊಲವಿಂದಲೆ ।
ಆದರಿಸದ ದುರ್ನಡತೆಗೆ ಹೇಸಿ
ಪೋದುದು ದೈತ್ಯರ ಸಿರಿಸಂಪತ್ತು ॥ ೮೪ ॥

ಗುಣವಿಲ್ಲದೆ ನೆಲಸದ ಸಂಪತ್ತು
ಗುಣಸಂಬಂಧದೆ ಕಾಲೂರುವುದು ।
ಗುಣವಿಲ್ಲದ ದೈತ್ಯರನುಳಿದೈಸಿರಿ
ಗುಣಿಗಳನಮೃತಾಂಧಸರನು ಸೇರಿತು ॥ ೮೫ ॥

ಅಸಮಂಜಸದಸವರ್ಣವಿವಾಹವ
ನೆಸಗಲು ನಿಸ್ಸಂದೇಹದೆ ನೈಚ್ಯವು ।
ಅಸುರಾಚಾರ್ಯರ್ತನೂಭವೆಯನು ಕಾ--
ಮಿಸಿದ ಯಯಾತಿಯ ಗತಿಯೇನಾದುದು? ॥ ೮೬ ॥

ರೂಪಕುಲಾರ್ಥಜ್ಞಾನವಿಹೀನನ
ನುಪಹಾಸವನೆಸಗುತ್ತಿರಲಾಗದು ।
ಅಪಹಾಸ್ಯವನೆಸಗಿದ ರಾವಣನನು
ಶಪಿಸಿದನಲೆ ಕಪಿವದನದ ನಂದಿಯು ॥ ೮೭ ॥

ಮುಂದೊತ್ತುತೆ ನೀ ಬಂಧುವಿರೋಧವ
ನಂದಿಸು! ಪಕ್ಷವ ವಹಿಸುತೆ ಕೆಡದಿರು ।
ಅಂದಿನ ಕುರುಪಾಂಡವಸಂಗ್ರಾಮದೆ
ಸಂದಿರ್ದನೆ ಬಲಸಾಹವಮಲ್ಲನು ॥ ೮೮ ॥

ಓಕರ್ಮಠ ಸತ್ವಾಧಿಕ ಮಹಿಮಾ
ಲೋಕಕೆ ಶಾಶ್ವತದುಪಕೃತಿಯೆಸಗು ।
ಲೋಕವಿಜೇತನು ಭಗವಾನ್ ಬುದ್ಧನು
ಲೋಕವನುದ್ಧರಿಸಲು ಹೆಣಗಿದನು ॥ ೮೯ ॥

ಸಲಹಲುಃಬೇಕು ವಿಪದ್ಗ್ರಸ್ತರನು
ಬಲುಬನ್ನದೆ ನೊಂದಿಹ ಬಂಧುಗಳನು ।
ಸಲಹಿದನಾಬಲಿ ನೆಂಟರನಿಷ್ಟರ
ಸೊಲಿದಿಹ ಕಲ್ಪದ್ರುಮವೆನೆ ಮೆರೆದು ॥ ೯೦ ॥

ಮಾರಣಾದ್ಯಭಿಚಾರಗಳಾಗದು
ವೈರದ ಕೃತ್ಯವೆ ತನಗಪಮೃತ್ಯುವು ।
ಆ ರಘುಕುಲಬಾಲಕನ ವಿನಾಶದ
ಮಾರಣದಿಂದಲೆ ರಾವಣಿಯುಳಿದನು ॥ ೯೧ ॥

ಮತಿವಂತನೆ ಪರಿವಿಡಿಯಿಂದಲೆ ಪೊರೆ
ಚತುರಾಶ್ರಮಗಳ ನತಿನಿಯಮಗಳಿಂ ।
ಅತಿವಿಖ್ಯಾತಯಯಾತಿಪ್ರಮುಖರು
ಚತುರಾಶ್ರಮಗಳನಂದದೆ ಪೊರೆದರು ॥ ೯೨ ॥

ಧನವನು ಸಂಕಷ್ಟದೆ ಗಳಿಸಿದರೂ
ಮನವೆಳಸಿದ ದಾನವೆ ನೆಲೆಯುದಕೆ ।
ಧನವನು ಕೊಡದಿಹ ವಾತಾಪಿಯನೇ
ಮುನಿ ಭಕ್ಷಿಸೆ ಬರಿದಾದುದು ಕೋಶವು ॥ ೯೩ ॥

ಅವಸಾನಕೆ ಬಗೆ ಬೇಯುವ ವ್ಯಥೆಯನು
ಸವನಿಪ ಕಾರ್ಯವ ನೆಸಗಲು ಬಾರದು ।
ನವಶಿರವಳಿಯಲು ಸೀತಾಮಾತೆಯ
ನೆವದಿಂ ರಾವಣನತಿ ದುಃಖಿಸಿದನು ॥ ೯೪ ॥

ತನುವನು ನರೆಜರೆಗಳು ಬಂದಡಸಲು
ವನವಾಸಕೆ ಮನಮಾಡಾಶೆಯ ಬಿಡು ।
ವನವಾಸದೊಳೇ ಕುರುಕುಲಭೂಪರು
ಕೊನೆಗಂಡರು ಚಿನುಮಯನಂ ಧ್ಯಾನಿಸಿ ॥ ೯೫ ॥

ಮುದುಕರು ಜನ್ಮಜರಾದಿನಿದಾನದ
ತುದಿಮೊದಲನೆ ಪರಿಭಾವಿಸಬೇಕು ।
ವಿದುರಜ್ಞಾನಾಗ್ನಿಯ ಬೇಗೆಗೆ ಜ-
ನ್ಮದ ಬೀಜವೆ ಬೆಂದುದು ಧರೆಯರಿಯಲು ॥ ೯೬ ॥

ಅಂತರ್ಜ್ಯೋತಿಸನಾತನರೂಪಿಯ
ನಂತರಾತ್ಮಪರಮಾತ್ಮನನರಿತಿರು ।
ಅಂತರ್ಗತನಂ ಯೋಗದೆ ಕಂಡರು
ಪಿಂತಣ ಶುಕಶಾಂತನವಾದಿಗಳು ॥ ೯೭ ॥

ಬದುಕನು ಪಾವನಗೊಳಿಸುವೆಯಾದರೆ
ಬದುಕುವೆ ಪುಣ್ಯ ಶರೀರವ ಪಡೆದು ।
ಬದುಕುವರಾಮಾಂಧಾತಾದಿಗಳು
ಸದಮಲಕೀರ್ತಿಶರೀರದೊಳಿಂದಿಗು ॥ ೯೮ ॥

ದುರಿತನಿವಾರಣನಾರಾಯಣನನೆ
ಬರಿವರೆ ಸಂಸ್ಮರಿಸುತ್ತಿರಬೇಕು ।
ಹರಿಪೊರೆಯೆಂದಾಗರುಡಧ್ವಜನನೆ
ಶರಶಯನದೊಳಾಭೀಷ್ಮನು ನೆನೆದನು ॥ ೯೯ ॥

ಭಾಸುರವಚನಭುಜಂಗಗ್ರಥಿತಂ
ವ್ಯಾಸಾಂಬುಧಿಮಥನೋದ್ಭವಮೆನುತುಂ ।
ಆಸಕ್ತಿಯೊಳಾಸ್ತಿಕರೆಲ್ಲರು ಮಿಗೆ
ಸೂಸುವ ಕರ್ಣಾಮೃತವನೆ ಪೀರುಗೆ ॥ ೧೦೦ ॥



# ಇದರಲ್ಲಿ ಬರುವ ಪೂರ್ವಕಥೆಗಳ ಸೂಚನೆ

ಪದ್ಯ ಸಂಖ್ಯೆ

೩. ವಿಷ್ಣು ಆದಿತ್ಯನಾದಾಗ ಲಕ್ಷ್ಮಿ ತಾವರೆಯಿಂದ ಜನಿಸಿದಳು.

(ವಿಷ್ಣು ಪುರಾಣ ೧—೯)

೪. ಇಂದ್ರನು ದಧೀಚಿಮುನಿಯ ಎಲುಬನ್ನು ಪಡೆದು ತ್ವಷ್ಟೃ ನಿರ್ಮಿತವಾದ ವಜ್ರಾಯುಧದಿಂದ ವೃತ್ರನನ್ನು ಸಂಹರಿಸಿ ಬ್ರಹ್ಮ ಹತ್ಯಾಪಾತಕಕ್ಕೆ ಗುರಿಯಾದನು. ಆ ಪಾತಕವು ಅವನನ್ನು ಹಿಡಿದು ಪೀಡಿಸಬೇಕೆಂದು ಸಾಹಸಮಾಡುತ್ತಿತ್ತು. ಆಗ ಇಂದ್ರನು ಬ್ರಹ್ಮನನ್ನು ಶರಣೆಂದನು. ಬ್ರಹ್ಮನು ಆ ಪಾಪ ವನ್ನು ಕರೆದು ನೀನು ಅಗ್ನಿ, ವೃಕ್ಷ, ಅಪ್ಸರಸ್ತ್ರೀಯರು, ಜಲ ಇವರೊಂದಿಗೆ ವಿಭಕ್ತವಾಗಿ ಇರಬೇಕೆಂದು ಸಮಾಧಾನಪಡಿಸಿ ದನು. ಬಳಿಕ ದೇವೇಂದ್ರನು ಅಶ್ವಮೇಧಯಾಗಮಾಡಿ ಅವ ಭೃಥಸ್ನಾನದಿಂದ ಪಾಪವನ್ನು ಪರಿಹರಿಸಿಕೊಂಡನು.

(ಭಾರತ ಶಾಂತಿ. ಪ. ೨೮೮.)

೫. ಶ್ವೇತನು ಕೃತಯುಗದ ರಾಜನು. ಅವನು ರಾಜ್ಯಭಾರಮಾಡು ತ್ತಿದ್ದಾಗ ಕಪಾಲಗೌತಮನೆಂಬ ಬ್ರಾಹ್ಮಣನ ಮಗನು ಅಕಾಲ ಮರಣಕ್ಕೆ ತುತ್ತಾದನು. ಆಗ ಕಪಾಲಗೌತಮನು ಮೃತನ ಕಳೇಬರವನ್ನು ತಂದು ರಾಜನೊಡನೆ ನನ್ನ ಮಗನನ್ನು ಬದುಕಿ ಸೆಂದು ನಿರ್ಬಂಧಿಸಿದನು. ಅಗ ಶ್ವೇತನು ಬದುಕಿಸುವೆನೆಂದು ಒಪ್ಪಿಕೊಂಡು ಈಶ್ವರನನ್ನು ಪೂಜಿಸಿ ಬಾಲಕನನ್ನು ಬದು ಕಿಸಿದನು. (ಬ್ರಹ್ಮವೈವರ್ತ ಪುರಾಣ)

೭. ದಿತಿಯು ದಕ್ಷಬ್ರಹ್ಮನ ಮಗಳು. ಕಶ್ಯಪನ ಹೆಂಡತಿ. ಸಮು ದ್ರಮಥನಕಾಲದಲ್ಲಿ ಅವಳ ಮಕ್ಕಳಲ್ಲಿ ಹಲವರು ಹತರಾದು ದರಿಂದ ಖಿನ್ನಳಾಗಿ ಕಶ್ಯಪನ ಬಳಿಗೆ ಹೋಗಿ ದೇವೇಂದ್ರನನ್ನು ವಧಿಸತಕ್ಕ ವೀರಪುತ್ರನನ್ನು ಕರುಣಿಸಬೇಕೆಂದು ಬೇಡಿಕೊಂ

ಡಳು. ಅವನು ಆಗ, ಪುತ್ರಪ್ರಾಪ್ತಿಗಾಗಿ ನೀನು ಪರಿಶುದ್ಧ ಳಾಗಿದ್ದು ತಪಸ್ಸನ್ನು ಮಾಡಬೇಕು ಎಂದನು. ಹಾಗೆಯೇ ಅವಳು ಕುಶಪ್ಲವವೆಂಬ ಕ್ಷೇತ್ರದಲ್ಲಿ ತೀವ್ರತಪಸ್ಸನ್ನು ಮಾಡ ತೊಡಗಿದಳು. ಅವಳ ಉದ್ದೇಶವನ್ನರಿತು ಇಂದ್ರನು ಅಲ್ಲಿಗೆ ಬಂದು ಭಕ್ತಿಯಿಂದ ಅವಳ ಸೇವೆಮಾಡುತ್ತಿದ್ದನು. ಹೀಗಿ ರಲೊಂದುದಿನ ದಿತಿಯು ಹಗಲು ಹೊತ್ತಿನಲ್ಲಿ ತಲೆದಿಂಬಿನ ಮೇಲೆ ಕಾಲುಚಾಚಿ ಬಡಗು ದಿಕ್ಕಿಗಾಗಿ ತಲೆಮಾಡಿ ಮಲಗಿದ್ದಳು. ಆ ಸಮಯವನ್ನು ಸಾಧಿಸಿ ಇಂದ್ರನು ಗರ್ಭದೊಳಗೆ ಪ್ರವೇ ಶಿಸಿ ವಜ್ರಾಯುಧದಿಂದ ಗರ್ಭವನ್ನು ಏಳಾಗಿ ವಿಭಾಗಿಸಿದನು. ಆ ಗರ್ಭಪಿಂಡಗಳೇ ಮರುತ್ತುಗಳಾದುವು.

(ರಾಮಾಯಣ. ಬಾಲ. ೪೬--೪೭ ಸರ್ಗ)

೮. ಶ್ವೇತನು ವಿದರ್ಭದೇಶದ ಸುದೇವರಾಯನ ಮಗನು. ಬಹಳ ಕಾಲ ರಾಜ್ಯಭಾರಮಾಡಿ ಕಡೆಗೆ ತಮ್ಮನಾದ ಸುರಥನಿಗೆ ಅಧಿ ಕಾರವನ್ನು ವಹಿಸಿಕೊಟ್ಟು ನಿರ್ಜನಪ್ರದೇಶದಲ್ಲಿ ತಪಸ್ಸು ಮಾಡುತ್ತ ಬ್ರಹ್ಮಲೋಕವನ್ನು ಪಡೆದನು. ಆದರೆ ಪ್ರತಿ ದಿನವೂ ತಾನು ತಪಸ್ಸುಮಾಡಿದ ಕೊಳದ ಸಮೀಪಕ್ಕೆ ಬಂದು ತನ್ನ ಶವವನ್ನೇ ತಿಂದು ಹೋಗುತ್ತಿದ್ದನು. ಒಂದು ದಿನ ಅಗ ಸ್ತ್ಯನು ಅಲ್ಲಿಗೆ ತಪಸ್ಸುಮಾಡಲು ಬಂದಾಗ ಈ ವಿಚಿತ್ರವನ್ನು ಕಂಡು ಅದೇನೆಂದು ಆತನೊಡನೆ ಕೇಳಿ ವಿವರವನ್ನು ತಿಳಿದು ಅವನಿತ್ತ ಆಭರಣವನ್ನು ಸ್ವೀಕರಿಸಿದ ಕೂಡಲೆ ಆ ಶವವು ಮಾಯವಾಯಿತು. ಶ್ವೇತರಾಜನು ಸಂತೋಷದಿಂದ ಬ್ರಹ್ಮ ಲೋಕಕ್ಕೆ ಹೋದನು.

(ರಾಮಾಯಣ ಉತ್ತರ ಕಾಂಡ. ೭೬—೭೭ ಸರ್ಗ)

೯. ಕಲಿಯು ದಮಯಂತೀ ಸ್ವಯಂವರದ ವಾರ್ತೆಯನ್ನು ತಿಳಿದು ಮೋಹಭರಿತನಾಗಿ ಆ ಸ್ವಯಂವರಕ್ಕೆ ತಾನೂ ಹೊರಡಲನು ವಾದನು. ಅಷ್ಟರಲ್ಲಿಯೇ ದಮಯಂತಿ ನಳನನ್ನು ವರಿಸಿದ ಳೆಂದು ಇಂದ್ರಾದಿಗಳು ಹೇಳಿದರು. ಅದನ್ನು ಕೇಳಿ ಕಲಿಯು

ಕ್ರೋಧಾಂಧನಾಗಿ ನಳನನ್ನು ಭಂಗಪಡಿಸುವುದಕ್ಕಾಗಿ ಪುಷ್ಕರನನ್ನು ಆಶ್ರೈಸಿ, ನಳನು ಆಚಾರಭ್ರಷ್ಟನಾಗುವ ಸಮಯವನ್ನು ಹಾರೈಸಿದನು. ನಳನು ಕಾಲುತೊಳೆದಾಗ ಒದ್ದೆಯಾಗದೆ ಉಳಿದ ಭಾಗವನ್ನು ನಿರೀಕ್ಷಿಸಿ ಕಲಿಯು ಆ ಕಾಲಿನ ಮೂಲಕ ನಳನ ದೇಹವನ್ನು ಪ್ರವೇಶಿಸಿ ಅವನನ್ನು ಇಚ್ಛಾನುಸಾರ ಪೀಡಿಸಿದನು.

(ಭಾರತ. ಆರಣ್ಯಪರ್ವ. ಅಧ್ಯಾಯ. ೫೬)

೧೦. ಮಾಂಡವ್ಯನೆಂಬ ಬ್ರಾಹ್ಮಣನು. ಬಾಲ್ಯದಲ್ಲಿ ನೊಣಗಳನ್ನು ವಿಶೇಷವಾಗಿ ಕೊಲ್ಲುತ್ತಿದ್ದ ಕಾರಣ ಇವನನ್ನು ಅಣಿಮಾಂಡವ್ಯನೆಂದು ಕರೆಯುತ್ತಿದ್ದರು. ಪ್ರಾಪ್ತವಯಸ್ಕನಾದ ಮೇಲೆ ತಪೋನಿರತನಾಗಿ ಸಮಾಧಿಯಲ್ಲಿದ್ದಾಗ ಆ ದೇಶದ ಅರಮನೆಯನ್ನು ಕಳವು ಮಾಡಿದ ಕೆಲವು ಮಂದಿ ಕಳ್ಳರು ಆತನ ಆಶ್ರಮಕ್ಕೆ ಬಂದು ದ್ರವ್ಯಗಳನ್ನು ಅಲ್ಲೇ ಅಡಗಿಸಿ ತಾವೂ ಅಡಗಿಕೊಂಡರು. ರಾಜಭಟರು ಹುಡುಕುತ್ತ ಬಂದು ಕಳ್ಳರನ್ನೂ, ಮೌನವಾಗಿದ್ದ ಈತನನ್ನೂ ಅರಸನ ಬಳಿಗೆ ಕೊಂಡುಹೋಗಿ ರಾಜಾಜ್ಞೆಯಂತೆ ಎಲ್ಲರನ್ನೂ ಶೂಲಕ್ಕೇರಿಸಿದರು. ಇವನು ಮಾತ್ರ ಸಾಯದಿರುವುದನ್ನು ತಿಳಿದು ಅರಸನು ಹೆದರಿ ಶೂಲದಿಂದ ಇಳಿಸಿ ಕಾಲಿಗೆ ಬಿದ್ದು ಕ್ಷಮಾಯಾಚನೆ ಮಾಡಿದನು. ಮಾಂಡವ್ಯನು ಶೂಲವನ್ನು ಮುರಿದು ಕಯ್ಯಲ್ಲಿ ಹಿಡಿದುಕೊಂಡು ಹೊರಟನು. ದೇಹತ್ಯಾಗಾನಂತರದಲ್ಲಿ ಯಮಭಟರು ಬಂದು ನೊಣಗಳನ್ನು ಕೊಲ್ಲುತ್ತಿದ್ದುದಕ್ಕಾಗಿ ಆತನನ್ನು ನರಕಕ್ಕೆ ಕೊಂಡುಹೋದರು. ಅದಕ್ಕಾಗಿ ಅವನು ಸಿಟ್ಟುಗೊಂಡು ಭೂಮಿಯಲ್ಲಿ ಶೂದ್ರನಾಗಿ ಜನಿಸುವಂತೆ ಯಮನನ್ನು ಶಪಿಸಿದನು. ಅದರಂತೆಯೇ ಯಮನು ವಿದುರನಾಗಿ ಜನಿಸಿದನು.

(ಭಾರತ. ಆದಿಪರ್ವ. ೬೪, ೧೧೬. ಅಧ್ಯಾಯ)

೧೧. ವಿದೂರಥನು ಯಾದವರಲ್ಲೊಬ್ಬನು. ಅವನ ಹೆಂಡತಿ ಬಿಂದುಮತಿಯು ವೇಣಿಯಲ್ಲಿ ಅಡಗಿಸಿ ಇಟ್ಟುಕೊಂಡಿದ್ದ ಶಸ್ತ್ರದಿಂದ ಅವನನ್ನು ಇರಿದು ಕೊಂದಳು. (ಹರ್ಷ ಚರಿತೆ. ೬ ಉಚ್ಛ್ವಾಸ)

೧೨. ಯಾದವರು ಒಬ್ಬರಿಗೊಬ್ಬರು ಹೊಡೆದಾಡಿಕೊಂಡು ಎಲ್ಲರೂ ಅಳಿದರು. (ಮ. ಭಾರತ. ಮೌಸಲ ಪರ್ವ)

೧೩. ಜನಮೇಜಯನು ಚಂದ್ರವಂಶದ ಪೂರುರಾಜನಿಂದ ಕೌಸಲ್ಯೆ ಯೆಂಬವಳಲ್ಲಿ ಜನಿಸಿದವನು. ಇವನು ಮಗಧರಾಜಪುತ್ರಿ ಯಾದ ಸುನಂದೆಯನ್ನು ಮದುವೆಯಾಗಿ ಪ್ರಾಚೀನ್ವಂತನೆಂಬ ತನಯನನ್ನು ಪಡೆದನು. ಈ ಜನಮೇಜಯನು ಗಾರ್ಗ್ಯ ಮಹರ್ಷಿಯ ಮಗನನ್ನು ಹಿಂಸೆಮಾಡಿ ಕೊಂದು ಬ್ರಹ್ಮಹತ್ಯೆಗೆ ಗುರಿಯಾಗಿ ಶೌನಕವಂಶೀಯನಾದ ಇಂದ್ರೋತನೆಂಬ ಮುನಿ ಯಿಂದ ಅಶ್ವಮೇಧಯಾಗವಮಾಡಿಸಿ ಶಾಪವಿಮುಕ್ತನಾದನು.

(ಹರಿವಂಶ ಪ್ರ. ಪರ್ವ. ೩೦ ಅಧ್ಯಾಯ)

೧೪. ಹರಿಶ್ಚಂದ್ರನು ತ್ರಿಶಂಕುರಾಜನಿಂದ ಸತ್ಯವ್ರತೆಯೆಂಬಾಕೆಯಲ್ಲಿ ಜನಿಸಿದ ಸೂರ್ಯವಂಶದ ಅರಸು. ಇವನು ವಿಶ್ವಾಮಿತ್ರನ ಮೂಲಕ ರಾಜ್ಯಭ್ರಷ್ಟನಾಗಿ ಪತ್ನೀಪುತ್ರರೊಂದಿಗೆ ಕಾಶೀಪಟ್ಟಣ ವನ್ನು ಸೇರಿ ಹೆಂಡತಿಯನ್ನೂ ಮಗುವನ್ನೂ ಕಾಲಕೌಶಿಕನೆಂಬ ಬ್ರಾಹ್ಮಣನಿಗೆ ಮಾರಿ ತನ್ನನ್ನು ವೀರಬಾಹುವೆಂಬ ಚಂಡಾಲನಿಗೆ ವಿಕ್ರಯಿಸಿ ಅನೇಕಕಷ್ಟಗಳನ್ನು ಅನುಭವಿಸಿ ಪರಮೇಶ್ವರನ ಅನುಗ್ರಹದಿಂದ ವಿಶ್ವಾಮಿತ್ರನ ಮೂಲಕ ತನ್ನ ರಾಜ್ಯವನ್ನು ಪಡೆಕೊಂಡನು. (ಭಾಗವತ. ೯–೭.)

೧೫. ದ್ರೋಣಪರ್ವದಲ್ಲಿ ಯುಧಿಷ್ಠಿರನು "ಅಶ್ವತ್ಥಾಮೋಹತಃ" ಎಂದು ಹೇಳಿ ಕುಂಜರ ಎಂದಾಗ ಕೃಷ್ಣನು ಪಾಂಚಜನ್ಯವನ್ನು ಊದಿ ಕೇಳಿಸದಂತೆ ಮಾಡಿದನು. ನಿಜಕ್ಕೂ ಅಶ್ವತ್ಥಾಮನು ಮಡಿದನೆಂದೇ ಭಾವಿಸಿ ದ್ರೋಣನು ಆತ್ಮತ್ಯಾಗಮಾಡಿದನು. ಅದಕ್ಕಾಗಿ ಸ್ವರ್ಗಾರೋಹಣವಾದ ಮೇಲೆ ಯುಧಿಷ್ಠಿರನನ್ನು ದೇವದೂತರು ನರಕಕ್ಕೆ ಕೊಂಡೊಯ್ದು ತೋರಿಸಿದರು.

(ಭಾರತ. ಸ್ವರ್ಗಾರೋಹಣ ಪರ್ವ ೨ ಅಧ್ಯಾಯ)

೧೬. ವಿಭೀಷಣನು ರಾವಣನಿಗೆ ನೀತಿಹೇಳಿ ಅವನಿಂದ ತಿರಸ್ಕೃತನಾಗಿ ರಾಮನನ್ನು ಮರೆಹೊಂದಿದನು. ರಾಮನು ರಾಕ್ಷಸರನ್ನು ಸಂಹರಿಸಿ ಲಂಕೆಯಲ್ಲಿ ವಿಭೀಷಣನಿಗೆ ಪಟ್ಟಾಭಿಷೇಕಮಾಡಿಸಿದನು. (ರಾಮಾಯಣ. ಯುದ್ಧಕಾಂಡ. ೧೧೪–೧೧೫)

೧೭. ಕದ್ರುವಿನತೆಯರಿಗೆ ಉಚ್ಚೈಶ್ರವಸ್ಸಿನ ಬಾಲದ ಬಣ್ಣದ ಕುರಿತು ಸ್ಪರ್ಧೆಯುಂಟಾಗಿ ಸೋತವರು ಗೆದ್ದವರ ದಾಸ್ಯವನ್ನು ಮಾಡಬೇಕೆಂದು ಕಟ್ಟುಪಾಡಾಯಿತು. ಕದ್ರುವಿಗೆ ತನ್ನ ಮಾತು ಸುಳ್ಳಾಗುವುದೆಂದು ತೋರಿದ್ದರಿಂದ ಮಕ್ಕಳಾದ ಸರ್ಪಗಳನ್ನು ಕರೆದು–ನೀವು ನಾಳೆ ಹೋಗಿ ಇಂದ್ರನ ಕುದುರೆಯ ಬಾಲವನ್ನು ಸುತ್ತಿಕೊಳ್ಳಬೇಕೆಂದು ಹೇಳಿದಳು. ಅನ್ಯಾಯಮಾಡಲಾರೆವೆಂದು ಅವು ಮಾತೃವಾಕ್ಯವನ್ನು ಉಲ್ಲಂಘಿಸಿದುವು. ಅಗ ಕದ್ರುವು "ನೀಚರೇ ನನ್ನ ಮಾತನ್ನು ಲಕ್ಷ್ಯಮಾಡದ ನಿಮಗೆ ಬೆಂಕಿಯಲ್ಲಿ ಬಿದ್ದು ಬೇಯುವ ಮರಣವುಂಟಾಗಲಿ" ಎಂದು ಶಪಿಸಿದಳು. ಹಾಗೆಯೇ ಜನಮೇಜಯನ ಯಾಗದಲ್ಲಿ ಸರ್ಪಗಳಿಗೆ ನಾಶವುಂಟಾಗುವುದು. (ಭಾರತ. ಆದಿಪರ್ವ. ೩೦ ಅಧ್ಯಾಯ)

೧೮. ಯಯಾತಿಯು ಶುಕ್ರನ ಶಾಪದಿಂದ ಜರಾಜರ್ಜರಿತನಾದನು. ಹಾಗೆ ಪ್ರಾಪ್ತವಾದ ವಾರ್ಧಕ್ಯವನ್ನು ಸ್ವೀಕರಿಸಿಕೊಳ್ಳಬೇಕೆಂದು ಯದು ಮೊದಲಾದ ತನ್ನ ನಾಲ್ವರು ಮಕ್ಕಳೊಡನೆ ಕೇಳಿಕೊಂಡರೂ ಅವರು ಆ ಮಾತನ್ನು ಲಕ್ಷಿಸದಾದರು. ಕೊನೆಗೆ ಐದನೆಯವನಾದ ಪುರುವಿನೊಡನೆ ಕೇಳಲು ಅವನು ತಂದೆಯ ವಾಂಛೆಯನ್ನು ನಡೆಯಿಸಿದನು. ಅದಕ್ಕೆ ಸಂತುಷ್ಟನಾದ ಯಯಾತಿಯು "ನಿನಗೆ ಮನಃಪ್ರೀತಿಯಿಂದ ವರವನ್ನು ಕೊಡುವೆನು; ನಿನ್ನ ಸಂತತಿಯವರೇ ಸಮಸ್ತಕಾಮಿತಾರ್ಥಗಳನ್ನೂ ಪಡೆದು ರಾಜ್ಯದಲ್ಲಿ ನೆಲೆಗೊಂಡಿರುವರು ಎಂದು ಹೇಳುತ್ತ ಅವನಿಗೆ ಸಾಮ್ರಾಜ್ಯದ ಪಟ್ಟವನ್ನಿತ್ತನು. ಭಾರತ. ಆದಿಪರ್ವ. ೭೮ಅಧ್ಯಾಯ)

೧೯. ಬಲಿಯು ಪ್ರಹ್ಲಾದಪುತ್ರನಾದ ವಿರೋಚನನ ಮಗನು. ಇವನು ಇಂದ್ರನಿಂದ ಸಂಹೃತನಾಗಿ ಶುಕ್ರಾಚಾರ್ಯನ ಮೃತ

ಸಂಜೀವಿನೀವಿದ್ಯೆಯಿಂದ ಬದುಕಿ ವಿಶ್ವಜಿತ್ತೆಂಬ ಯಾಗವಮಾಡಿ ಅಗ್ನಿದೇವನ ಮೂಲಕ ರಥಾಶ್ವಧ್ವಜಗಳನ್ನೂ ಪ್ರಹ್ಲಾದನಿಂದ ದಿವ್ಯಧನುಸ್ಸನ್ನೂ ಅಕ್ಷಯತೂಣೀರವನ್ನೂ ಪಡೆದು ಇಂದ್ರನನ್ನು ಸೋಲಿಸಿ ಸ್ವರ್ಗವನ್ನು ಸ್ವಾಧೀನಪಡಿಸಿ ನರ್ಮದಾತೀರದಲ್ಲಿ ಅಶ್ವಮೇಧಯಾಗವಮಾಡತೊಡಗಿದನು. ಬ್ರಹ್ಮಾದಿಗಳ ಮೊರೆಯನ್ನು ಕೇಳಿ ವಿಷ್ಣುವು ಅದಿತಿಯ ಗರ್ಭದಲ್ಲಿ ವಾಮನನಾಗಿ ಜನಿಸಿ ಉಪನಯನವಾದ ಬಳಿಕ ಬಲಿಯೊಡನೆ ಮೂರಡಿ ನೆಲವನ್ನು ಬೇಡಿ ಎರಡು ಅಡಿಗಳಿಂದ ಭೂಮ್ಯಂತರಿಕ್ಷಗಳನ್ನು ಅಳೆದು ಮೂರನೆಯ ಅಡಿಯನ್ನು ಬಲಿಯ ತಲೆಯಲ್ಲಿಟ್ಟು ಆತನನ್ನು ಪಾತಾಳಕ್ಕೆ ಮೆಟ್ಟಿದನು.

(ಭಾರತ. ಸಭಾಪರ್ವ. ೪೭ ಅಧ್ಯಾಯ)

೨೦. ಕರ್ಣನು ಇಂದ್ರನಿಗೆ ಕವಚಕುಂಡಲಗಳನ್ನು ದಾನವಿತ್ತು ಬದಲಾಗಿ ಆತನಿಂದ “ವಿಮಲಾ” ಎಂಬ ಶಕ್ತಿಯನ್ನು ಪಡಕೊಂಡನು. (ಭಾರತ. ವನಪರ್ವ. ೩೧೧ ಅಧ್ಯಾಯ)

೨೧. ಪರೀಕ್ಷಿತಭೂಪಾಲನು ವೀರನಾದ ಅಭಿಮನ್ಯುವಿನ ಕುಮಾರನು. ಸಹಜವಾಗಿಯೇ ನೀತಿವಂತನೂ, ಧಾರ್ಮಿಕನೂ, ಬ್ರಾಹ್ಮಣಭಕ್ತನೂ ಆಗಿದ್ದನು. ಆದರೆ ಅವನೊಮ್ಮೆ ಪ್ರಾರಬ್ಧಯೋಗದಿಂದ ಬೇಟೆಗೆ ಹೋಗಿದ್ದಾಗ ಶಮೀಕಮುನಿಯ ಆಶ್ರಮವನ್ನು ಪ್ರವೇಶಿಸಿದನು. ಸಮಾಧಿಸ್ಥನಾಗಿದ್ದ ಮುನಿಯು ಈತನನ್ನು ಗೌರವಿಸಲಿಲ್ಲ. ಅಲ್ಲಿ ಬೇರೆ ಯಾರೂ ಇದ್ದಿಲ್ಲ. ಸಿಟ್ಟುಗೊಂಡ ಅರಸನು ಅಲ್ಲೇ ಸಮೀಪದಲ್ಲಿ ಸತ್ತು ಬಿದ್ದಿದ್ದ ಹಾವನ್ನು ಬಿಲ್ಲಿನ ತುದಿಯಿಂದ ತೆಗೆದು ಮುನಿಯ ಕೊರಳಿಗೆ ಹಾಕಿ ಅಲ್ಲಿಂದ ಹೋದನು. ಸ್ವಲ್ಪ ಹೊತ್ತಿನಲ್ಲೇ ಶಮೀಕನ ಮಗ ಶೃಂಗಿಯು ಅಲ್ಲಿಗೆ ಬಂದು ನೋಡಿ ಕ್ರೋಧಪರವಶನಾಗಿ “ನಮ್ಮ ತಂದೆಯ ಕೊರಳಿಗೆ ಸತ್ತ ಹಾವನ್ನು ಹಾಕಿ ಬ್ರಾಹ್ಮಣಕುಲಕ್ಕೆ ಅಪಮಾನ ಮಾಡಿದವನು ಇಂದಿಗೆ ಏಳು ದಿನಗಳೊಳಗಾಗಿ ಸರ್ಪದಂಶದಿಂದ ಸಾಯಲಿ” ಎಂದು ಶಾಪವಿತ್ತನು.

(ಭಾಗವತ. ೧–೧೬. ಮ. ಭಾ. ಆದಿಪರ್ವ. ೪೯–೫೦ ಅಧ್ಯಾಯ)

೨೨. ಕರ್ಣನು ಬ್ರಾಹ್ಮಣವೇಷದಿಂದ ಹೋಗಿ ಪರಶುರಾಮನಲ್ಲಿ ಅಸ್ತ್ರವಿದ್ಯೆಗಳ ಉಪದೇಶಹೊಂದಿದನು. ಆ ರಹಸ್ಯವು ತಿಳಿಯಲು, ಪಡೆದ ಅಸ್ತ್ರಗಳು ಯುದ್ಧದಲ್ಲಿ ಫಲಿಸದಂತೆ ಪರಶುರಾಮನಿಂದ ಶಾಪವನ್ನು ಪಡೆದುಕೊಂಡನು.

(ಭಾರತ. ಶಾಂತಿ. ರಾಜಧರ್ಮ. ೩ ಅಧ್ಯಾಯ)

೨೩. ಭೀಷ್ಮದ್ರೋಣ ಮೊದಲಾದ ಗುರುಹಿರಿಯರು ದುರ್ಯೋಧನನಿಗೆ ಬಹುವಿಧವಾಗಿ ಬುದ್ಧಿಹೇಳಿದರೂ ದುರ್ಯೋಧನನು ಕೇಳದೆ ಪಾಂಡವರೊಡನೆ ದ್ವೇಷವನ್ನೇ ವೃದ್ಧಿಗೊಳಿಸಿದನು. ಅವನಲ್ಲಿ ಇದ್ದುದಕ್ಕಾಗಿ ಕುರುಪಟ್ಟದ ಮೇಲೆ ಸ್ವಾಮಿಭಕ್ತಿಯನ್ನು ತೋರಿಸುವುದು ತಮ್ಮ ಕರ್ತವ್ಯವೆಂದು ತಿಳಿದು ಅವರು ಭಾರತ ಯುದ್ಧದಲ್ಲಿ ಆತ್ಮಸಮರ್ಪಣೆ ಮಾಡಿದುದು ಪ್ರಸಿದ್ಧವಾಗಿದೆ.

೨೪. ಶಿಬಿಯನ್ನು ಉಶೀನರನೆಂದೂ ಕರೆಯುವರು. ಅವನು ಯಾಗ ಮಾಡಿ ಇಂದ್ರನಿಗಿಂತಲೂ ಯೋಗ್ಯತೆಯಲ್ಲಿ ಮೇಲೆನಿಸಿದನು. ಅವನ ಮಹಿಮೆಯನ್ನು ಪರೀಕ್ಷಿಸಿ ತಿಳಿಯಬೇಕೆಂದು ಇಂದ್ರನು ಗಿಡುಗನೂ ಅಗ್ನಿಯು ಕಪೋತವೂ ಆಗಿ ಅವನಲ್ಲಿಗೆ ಹೋಗುವುದಾಗಿ ನಿಶ್ಚೈಸಿಕೊಂಡರು. ಹಾಗೆಯೇ ಗಿಡುಗನು ಕಪೋತವನ್ನು ಬೆನ್ನಟ್ಟಲು ಅದು ಪ್ರಾಣಭಯದಿಂದ ಶಿಬಿಯನ್ನು ಮರೆಹೊಂದಿತು. ಅದನ್ನು ರಕ್ಷಿಸುವುದಕ್ಕಾಗಿ ಶಿಬಿಚಕ್ರವರ್ತಿಯು ಅದರ ತೂಕದಷ್ಟು ಮಾಂಸವನ್ನು ಕೊಟ್ಟರೂ ಅದು ತೂಕಕ್ಕೆ ಸರಿಬಾರದಿರಲು ತಾನೇ ತ್ರಾಸಿನಲ್ಲಿ ಏರಿ ಕುಳಿತನು. ಆಗ ಅವನ ಔದಾರ್ಯಕ್ಕೆ ಇಂದ್ರಾಗ್ನಿಗಳು ಪ್ರಸನ್ನರಾದರು.

(ಭಾರತ. ಅರಣ್ಯಪರ್ವ. ೧೩೧ ಅಧ್ಯಾಯ)

೨೬. ಗೌತಮನೆಂಬ ಬ್ರಾಹ್ಮಣನು ನಾಡೀಜಂಘನೆಂಬ ಬಕಪಕ್ಷಿಯ ಆತಿಥ್ಯವನ್ನು ಸ್ವೀಕರಿಸಿ ಅವನ ಹೇಳಿಕೆಯಂತೆ ಧನವನ್ನು ಹೊಂದುವುದಕ್ಕಾಗಿ ವಿರೂಪಾಕ್ಷನೆಂಬ ರಾಕ್ಷಸೇಂದ್ರನಲ್ಲಿಗೆ ಹೋದನು. ಅಲ್ಲಿಂದ ಅವನು ಕೊಟ್ಟ ದ್ರವ್ಯದ ಹೊರೆಯನ್ನು ಹೊತ್ತುಕೊಂಡು ಬರುತ್ತ ಸಹಾಯ ಮಾಡಿದ ಪಕ್ಷಿಯು ನಿದ್ರೆ

ಸುತ್ತಿದ್ದುದನ್ನು ನೋಡಿ ಅದನ್ನು ಪಕ್ವಮಾಡಿ ದಾರಿಯೂಟಕ್ಕಾಗಿ ಕಟ್ಟಿಕೊಂಡು ಹೋಗುತ್ತಿದ್ದನು. ಮರುದಿನ ರಾಕ್ಷಸನಿಗೆ ಸಂದೇಹವುಂಟಾಗಿ ತನ್ನ ಮಗನನ್ನು ಕಳುಹಿಸಿ ಬ್ರಾಹ್ಮಣನನ್ನು ಹುಡುಕಿಸಿ ಚಿತ್ರಹಿಂಸೆಯಿಂದ ಕೊಲ್ಲಿಸಿದನು. ಬಕದ ಶವಸಂಸ್ಕಾರವಾಗುತ್ತಿದ್ದಾಗ ಕಾಮಧೇನುವಿನ ಬಾಯಿಂದ ನೊರೆಯು ಶವದ ಮೇಲೆ ಬಿದ್ದು ಬಕವು ಬದುಕಿತು. ಅದರ ಪ್ರಾತಿನಿಂದ ಇಂದ್ರನು ಗೌತಮನನ್ನು ಬದುಕಿಸುವನು. ಕೊನೆಗೆ ಗೌತಮನು ನರಕದಲ್ಲಿ ಬೀಳುವನು.

(ಭಾರತ. ಶಾಂತಿಪರ್ವ. ೧೬೮ ಅಧ್ಯಾಯ)

೨೭. ದಶರಥನು ಕೈಕೇಯಿಗೆ ವರಪ್ರದಾನವಾಡಿ ರಾಮನನ್ನು ವನವಾಸಕ್ಕೆ ಅಟ್ಟಿ ಪುತ್ರವಿಯೋಗದಿಂದಲೇ ಮಡಿದು ಹೋದನು.

(ರಾಮಾಯಣ. ಅಯೋಧ್ಯಾಕಾಂಡ)

೨೮. ಯಯಾತಿಯೊಡನೆ ಒಂದು ದಿನ ದೇವೇಂದ್ರನು—ನೀನು ಸಮಸ್ತ ಕಾರ್ಯಗಳನ್ನೂ ಪೂರೈಸಿಕೊಂಡು ಮನೆಬಿಟ್ಟು ತಪೋವನಕ್ಕೆ ಬಂದವನಲ್ಲವೆ? ನೀನೀಗ ತಪೋನಿರತನಾಗಿರುವೆಯಷ್ಟೆ! ತಪೋವಿಷಯದಲ್ಲಿ ನಿನ್ನನ್ನು ಯಾರೊಡನೆ ಹೋಲಿಸಬಹುದು! ಎಂದು ಕೇಳಿದನು. ಅದಕ್ಕೆ ಯಯಾತಿಯು—ದೇವೇಶ, ತಪಸ್ಸಿನಲ್ಲಿ ನನಗೆ ಸಮಾನರಾರೂ ಇಲ್ಲವೆಂದೇ ನನ್ನ ಭಾವನೆ. ಮನುಷ್ಯರಲ್ಲಾಗಲಿ, ಗಂಧರ್ವರಲ್ಲಾಗಲಿ ಕೊನೆಗೆ ಮಹರ್ಷಿಗಳಲ್ಲಾಗಲಿ ನನಗೆ ಸಮಾನರಾದವರನ್ನು ನಾನು ಕಾಣಲಿಲ್ಲವೆಂದು ಹೇಳಿದನು. ಈ ಹೆಮ್ಮೆಯ ಮಾತುಗಳನ್ನು ಕೇಳಿ ಇಂದ್ರನು—ಯಯಾತೀ! ನೀನು ಇತರರ ಮಹಿಮೆಯನ್ನು ತಿಳಿಯದೆ ಎಲ್ಲರನ್ನೂ ತಿರಸ್ಕರಿಸಿ ಆತ್ಮಶ್ಲಾಘನೆ ಮಾಡಿದುದರಿಂದ ನಿನ್ನ ಪುಣ್ಯಫಲಗಳೆಲ್ಲವೂ ನಷ್ಟವಾದುವು. ಆದುದರಿಂದ ನಿನಗೆ ಈ ಲೋಕವು ಸಲ್ಲದು. ಇಲ್ಲಿಂದ ಅಧೋಗತಿಗೆ ಬೀಳು ಎಂದನು.

(ಭಾರತ. ಆದಿಪರ್ವ. ೮೪)

೨೯. ಬೇಟೆಗೆ ಹೋಗಿದ್ದ ಪಾಂಡುಭೂಪತಿಯು ಮೃಗವನ್ನು ಹೊಡೆದು ಮೃಗರೂಪದಿಂದ ವಿಹರಿಸುತ್ತಿದ್ದ ಕಿಂದಮಮಹರ್ಷಿಯ ಶಾಪಕ್ಕೆ ಗುರಿಯಾದನು. (ಮ. ಭಾ. ಆದಿಪರ್ವ)

೩೦. ಭೀಮದುರ್ಯೋಧನರಿಗೆ ಬಾಲ್ಯದಿಂದಲೇ ಉಂಟಾಗಿದ್ದ ವೈರವು ಮಿತಿಮೀರಿ ಪ್ರಬಲಿಸಿದುದರಿಂದಲೇ ಭೀಮನು ತನ್ನ ಪ್ರತಿಜ್ಞೆಯಂತೆ ಧಾರ್ತರಾಷ್ಟ್ರರನ್ನೆಲ್ಲಾ ಸಂಹಾರಮಾಡಿದನು.

೩೧. ಮೋಹಿನಿಯು ದೇವತೆಗಳಿಗೆ ಅಮೃತವನ್ನು ಹಂಚುತ್ತಿದ್ದಾಗ ಸಿಂಹಿಕಾಪುತ್ರನು ಸರ್ಪದ ರೂಪದಿಂದ ಪಙ್ಕ್ತಿಯಲ್ಲಿ ಕುಳಿತು ಅಮೃತಪಾನಮಾಡುತ್ತಿದ್ದ ರಹಸ್ಯವನ್ನು ಸೂರ್ಯಚಂದ್ರರು ಸೂಚಿಸಲು, ಅವನು ವಿಷ್ಣುಚಕ್ರದಿಂದ ತುಂಡಾದನು. ಅವನ ರುಂಡವು ರಾಹುವೆನಿಸಿ ಗ್ರಹಣರೂಪದಿಂದ ಸೂರ್ಯಚಂದ್ರರನ್ನು ನುಂಗಲು ಬರುತ್ತಿರುವುದು.

(ಭಾರತ ಆದಿಪರ್ವ. ೧೯ ಅಧ್ಯಾಯ)

೩೨. ಬ್ರಹ್ಮನೇ ಮೊದಲಾದ ದೇವತೆಗಳ ಮಾತಿನಂತೆ ಹರಿಯು ವಾಮನನಾಗಿ ಜನಿಸಿ ಬಲಿಯೊಡನೆ ಮೂರಡಿ ನೆಲವನ್ನು ಬೇಡಿದನು. (ಬೇಡುವುದು ಬಹಳ ಕೊರತೆ! ಯಾಚಕನು ಬಹಳ ಸಂಕೋಚಪಡುತ್ತಿರುವನು! ಲೋಕದ ನಿಂದೆಗೆ ವಿಶೇಷವಾಗಿ ಗುರಿಯಾಗುವನು! ಎಂಬುದು ತಾತ್ಪರ್ಯ.)

೩೩. ಬ್ರಹ್ಮನು ತ್ರಿಮೂರ್ತಿಗಳಲ್ಲಿ ತಾನೇ ಸರ್ವಶ್ರೇಷ್ಠನೆಂಬುದಾಗಿ ಗರ್ವಗೊಂಡು ವೇದಗಳನ್ನು ನಿಂದಿಸಿ ಮಾತನಾಡಿದಾಗ ಶಿವನು ಮೈದೋರಿ ಬ್ರಹ್ಮನಿಂದ ತಿರಸ್ಕೃತನಾದನು. ಆಗ ಶಿವನು ಭೈರವನನ್ನು ಸೃಜಿಸಿ ಬ್ರಹ್ಮನ ಐದನೆಯ ತಲೆಯನ್ನು ಕತ್ತರಿಸುವಂತೆ ಮಾಡಿದನು. (ಶಿವಪುರಾಣ. ಪ್ರಥಮ ಖಂಡ ೭.)

೩೪. ದಕ್ಷನು ತನ್ನ ಹೆಣ್ಣು ಮಕ್ಕಳಲ್ಲಿ ಸತೀದೇವಿಯನ್ನು ಶಿವನಿಗೆ ಕೊಟ್ಟಿದ್ದನು. ದೇವಸಭೆಯಲ್ಲಿ ಅಳಿಯನು ತನಗೆ ಮರ್ಯಾದೆ ಮಾಡಲಿಲ್ಲವೆಂಬ ಆಗ್ರಹದಿಂದ ದಕ್ಷನು ಶಿವನನ್ನು ಅಲಕ್ಷ್ಯ ಮಾಡಿ ನಿರೀಶ್ವರಯಾಗಮಾಡತೊಡಗಿದನು. ತನಗೆ

ಆಮಂತ್ರಣವಿಲ್ಲದಿದ್ದರೂ ಸತಿಯು ಯಾಗಶಾಲೆಗೆ ಹೋಗಿ ಅಪಮಾನತಿರಸ್ಕಾರಗಳಿಗೆ ಗುರಿಯಾಗಿ ಯೋಗಾಗ್ನಿಯಲ್ಲಿ ದೇಹತ್ಯಾಗಮಾಡಿದಳು. ಈ ಸಮಾಚಾರವನ್ನು ಕೇಳಿ ಶಿವನು ವೀರಭದ್ರನ ಮೂಲಕ ದಕ್ಷನ ಯಾಗವನ್ನು ವಿಧ್ವಂಸಗೊಳಿಸಿ ಆತನ ತಲೆಯನ್ನೂ ಕತ್ತರಿಸುವಂತೆ ಮಾಡಿದನು.

(ಮ. ಭಾ. ಶಾಂತಿಪರ್ವ. ೨೯೦ ಅಧ್ಯಾಯ.)

೩೫. ಶಿಶುಪಾಲನು ಯದುವಂಶದ ಜ್ಯಾಮಘನ ಸಂತತಿಯಲ್ಲಿ ಜನಿಸಿದ ದಮಘೋಷನಿಂದ ವಸುದೇವನ ತಂಗಿಯಾದ ಶ್ರುತಶ್ರವೆಯಲ್ಲಿ ಜನಿಸಿದವನು. ತನ್ನ ಮಗನಿಗೆ ಕೃಷ್ಣನೇ ವೈರಿಯೆಂಬುದನ್ನು ತಿಳಿದು ಶ್ರುತಶ್ರವೆಯು ಹೆದರಿ ತನ್ನ ಮಗನ ಶತಾಪರಾಧಗಳನ್ನೂ ಮನ್ನಿಸುವಂತೆ ಬೇಡಿಕೊಂಡಳು. ಕೃಷ್ಣನು ಸಮ್ಮತಿಸಿದನು. ಪಾಂಡವರ ರಾಜಸೂಯದಲ್ಲಿ ಕೃಷ್ಣನಿಗೆ ಅಗ್ರಪೂಜೆಯಾದುದಕ್ಕಾಗಿ ಶಿಶುಪಾಲನು ಕೃಷ್ಣನನ್ನು ಬಾಯಿಗೆ ಬಂದಂತೆ ಬೈದು ಸುದರ್ಶನದಿಂದ ಘಾಸಿಯಾದನು.

(ಭಾರತ. ಸಭಾಪರ್ವ. ೪೦ ಅಧ್ಯಾಯ)

೩೬. ಸೀತೆಯನ್ನು ಹುಡುಕುವುದಕ್ಕಾಗಿ ಸಮುದ್ರವನ್ನು ಉಲ್ಲಂಘಿಸಲು ನಮ್ಮವರಲ್ಲಿ ನೀನೇ ವೀರನೆಂದು ಜನ್ಮವೃತ್ತಾಂತದೊಡನೆ ಜಾಂಬವಂತನ ಸ್ತೋತ್ರದಿಂದ ಉಬ್ಬಿದ ಹನುಮಂತನು ಲಂಕೆಗೆ ಹಾರಿದನು. (ರಾಮಾಯಣ. ಕಿಷ್ಕಿಂಧಾಕಾಂಡ ೬೬. ಸರ್ಗ)

೩೭. ಅಶ್ವತ್ಥಾಮನನ್ನು ಕೃಷ್ಣನು ಶಪಿಸಿದುದು (ಭಾರತ. ಸೌಪ್ತಿಕಪರ್ವದ ಕೊನೆಯಲ್ಲಿ.) ವಿದುರನು ಬ್ರಹ್ಮಜ್ಞಾನಿಯು. (ಅಣುಮಾಂಡವ್ಯನ ಶಾಪದಿಂದ ಯಮಧರ್ಮನು ಶೂದ್ರನಾಗಿ ಹುಟ್ಟಿದನು)

೩೮. ಹಾಲಾಹಲವು ದೇವದಾನವರು ಪಾಲ್ಗಡಲನ್ನು ಕಡೆದಾಗ ಅಲ್ಲಿಂದ ಹುಟ್ಟಿದ ಹದಿನಾಲ್ಕು ವಸ್ತುಗಳಲ್ಲಿ ಒಂದಾದ ಭಯಂಕರವಿಷವು. ಇದರ ವೇಗದಿಂದ ಮೂಲೋಕವೂ ತಲ್ಲಣಿಸುತ್ತಿರಲಾಗಿ ಶಿವನು ಇದನ್ನು ನುಂಗಿ ನೀಲಕಂಠನೆನಿಸಿದನು.

(ಭಾಗವತ ೮-೭)

೩೯. ವಿಶ್ವಾಮಿತ್ರನು ಚಂದ್ರವಂಶದ ಕುಶಿಕರಾಜನ ವಂಶಜನಾದ ಗಾಧಿರಾಜನ ಮಗನು. ಇವನು ಬೇಟೆಗೆ ಹೋಗಿದ್ದಾಗ ವಸಿಷ್ಠನ ಆಶ್ರಮಕ್ಕೆ ಹೋಗಿ ಆತನಿಂದ ಸತ್ಕೃತನಾಗಿ ನಂದಿನೀ ಧೇನುವನ್ನು ಬೇಡಿ ಕ್ಷತ್ರಿಯಬಲವು ನಿಸ್ಸಾರವೆಂದೂ, ಬ್ರಹ್ಮಬಲವೇ ಬಲವೆಂದೂ ತಿಳಿದು ಬ್ರಹ್ಮರ್ಷಿಯಾದನು.

(ಭಾರತ. ಆದಿಪರ್ವ. ೧೯೧ ಅಧ್ಯಾಯ)

೪೦. ವಿಶ್ವಾಮಿತ್ರನು ತಪಸ್ಸನ್ನು ಭಂಗಗೊಳಿಸಲು ಬಂದ ಮೇನಕೆಯೊಂದಿಗೆ ಸೇರಿ ಶಕುಂತಲೆಯನ್ನು ಪಡೆದನು.

(ಭಾರತ. ಆದಿಪರ್ವ. ೯೩. ಅಧ್ಯಾಯ)

೪೧. ಅಶ್ವತ್ಥಾಮನು ಮಡಿದನೆಂಬ ಸುದ್ದಿಯನ್ನು ಕೇಳಿ ದುಃಖಿತನಾದ ದ್ರೋಣನನ್ನು ಕೊಲ್ಲಲು ಧೃಷ್ಟದ್ಯುಮ್ನನು ಪ್ರಯತ್ನಿಸಿದನು. ಆಗ ದ್ರೋಣನು ಭೀಮನ ಮೊನೆಮಾತುಗಳನ್ನು ಕೇಳಿ ಶಸ್ತ್ರತ್ಯಾಗಮಾಡಿದನು. (ಭಾರತ. ದ್ರೋಣಪರ್ವ. ೧೯೨ ಅಧ್ಯಾಯ)

೪೨. ಭೀಮಸೇನನು ಅರಸರೆಲ್ಲರ ಮುಂದೆ ರಣಾಂಗಣದಲ್ಲಿ ದುಶ್ಶಾಸನನ ತೋಳುಗಳನ್ನು ಮುರಿದು ಅವನ ಎದೆಯನ್ನು ಬಗಿದು ರಕ್ತಪಾನಮಾಡಿದನು. (ಭಾರತ.ಕರ್ಣಪರ್ವ. ೮೬–೮೭ ಅಧ್ಯಾಯ)

೪೩. ಬಾಣನು ಬಲಿಚಕ್ರವರ್ತಿಯ ಹಿರಿಯ ಮಗನು. ಇವನಿಗೆ ಸಾವಿರ ತೋಳುಗಳು. ತಾಂಡವದಿಂದ ಶಿವನನ್ನು ಮೆಚ್ಚಿಸಿ, ನೀನು ನನಗೆ ಮೆಚ್ಚಿರುವೆಯಾದರೆ ಯುದ್ಧವನ್ನೇ ಬಯಸುವೆನೆಂದು ಬೇಡಿಕೊಂಡು ಯುದ್ಧದಿಂದಲೇ ಮಡಿದನು.

(ಹರಿವಂಶ. ದ್ವಿತೀಯಪರ್ವ)

೪೪. ಕಚನು ದೇವಗುರುವಾದ ಬೃಹಸ್ಪತಿಯ ಮಗನು. ಸತ್ತವರನ್ನು ಬದುಕಿಸುವ ಮೃತಸಂಜೀವಿನೀವಿದ್ಯೆಯನ್ನು ಕಲಿಯುವುದಕ್ಕಾಗಿ ಶುಕ್ರಾಚಾರ್ಯನ ಬಳಿಗೆ ಹೋಗಿ ಶಿಷ್ಯವೃತ್ತಿಯನ್ನು ಅವಲಂಬಿಸಿದನು. ಅಲ್ಲಿ ಅವನನ್ನು ರಾಕ್ಷಸರು ಕೊಂದುಬಿಡಲು ಬಹು ವಿಧವಾಗಿ ಪ್ರಯತ್ನಿಸಿದರು. ಆದರೂ ಅವನು ದೇವಯಾನಿಯ ಮೂಲಕ ಹೇಗೊ ಬದುಕಿಕೊಂಡು ಶುಕ್ರನಿಂದ ವಿದ್ಯೆಯನ್ನು ಕಲಿತುಕೊಳ್ಳುವನು. (ಭಾ.ಆದಿ.೭೦ ಅ.)

೪೫. ಶ್ರೀರಾಮಚಂದ್ರನು ಲೋಕಾಪವಾದದ ದೆಸೆಯಿಂದ ಮನ ನೊಂದು ಸೀತೆಯನ್ನು ಅರಣ್ಯಕ್ಕಟ್ಟಿದನು. ಅವಳನ್ನು ಲಕ್ಷ್ಮ ಣನು ಗಂಗಾತೀರದ ಅರಣ್ಯದಲ್ಲಿ ಬಿಟ್ಟುಹೋದನು.

(ಉತ್ತರ ರಾಮಾಯಣ ೪೩-೪೮)

೪೬. ಇಂದ್ರದ್ಯುಮ್ನನು ಹಿಂದಣ ಕಾಲದ ಅರಸನು. ದೇವಲೋಕ ದಲ್ಲಿ ಬಹುಕಾಲ ವಾಸಮಾಡಿ ಕೀರ್ತಿಯು ಅಳಿದು ಹೋಗಲು ದೇವತೆಗಳು ಅವನನ್ನು ಭೂಮಿಗೆ ಕಳುಹಿಸಿಬಿಟ್ಟರು. ಭೂಮಿಗೆ ಬಂದು ನೋಡಲು ಅವನಿಗೆ ಎಲ್ಲವೂ ಹೊಸತಾಗಿತ್ತು. ತನ್ನ ಪರಿಚಿತರು ಯಾರಾದರೂ ಇರುವರೋ ಎಂದು ವಿಚಾರಿಸ ತೊಡಗಿ ಮಾರ್ಕಂಡೇಯಮುನಿ, ಪ್ರಾವಾರಕರ್ಣನೆಂಬ ಗೂಗೆ, ನಾಳೀಜಂಘನೆಂಬ ಬಕಪಕ್ಷಿ, ಅಕೂಪಾರನೆಂಬ ಆಮೆ ಇವರ ನ್ನೆಲ್ಲಾ ವಿಚಾರಿಸುತ್ತಿದ್ದನು. ಆಗ ಆಮೆಯು ಇವನನ್ನು ಗುರು ತಿಸಿ ಇವನ ಕೀರ್ತಿಯನ್ನು ಕೊಂಡಾಡಿತು. ದೇವತೆಗಳು ಅವನನ್ನು ಮರಳಿ ಸ್ವರ್ಗಕ್ಕೆ ಬರಮಾಡಿಕೊಂಡರು.

(ಭಾರತ. ವನಪರ್ವ. ೨೦೨ ಅಧ್ಯಾಯ)

೪೭. ದತ್ತನೆಂದರೆ, ಇಂದ್ರದತ್ತನೆಂದು ತಿಳಿದುಕೊಳ್ಳಬೇಕು. ವ್ಯಾಡಿ ಇಂದ್ರದತ್ತರೆಂಬ ಬ್ರಾಹ್ಮಣ ಕುಮಾರರು ವೇತಸವೆಂಬ ಪಟ್ಟಣ ದಲ್ಲಿ ಜನ್ಮವೆತ್ತಿದರು. ಅವರಿಗೆ ಬಾಲ್ಯದಲ್ಲೇ ಮಾತಾಪಿತೃಗಳ ವಿಯೋಗವಾಯಿತು. ಅವರು ವಿದ್ಯಾಭಿಮಾನಿಗಳಾಗಿ ಕುಮಾರ ಸ್ವಾಮಿಯನ್ನು ಕುರಿತು ತಪಸ್ಸುಮಾಡಿದರು. ಆ ಸ್ವಾಮಿಯು ಸ್ವಪ್ನದಲ್ಲಿ-"ನಂದನು ಆಳುತ್ತಿರುವ ಪಾಟಲಿಪುರದಲ್ಲಿ ವರ್ಷ ನೆಂಬ ಬ್ರಾಹ್ಮಣನಿರುವನು. ಅವನಲ್ಲಿಗೆ ಹೋಗಿ ವಿದ್ಯಾಭ್ಯಾಸ ಮಾಡಿರಿ" ಎಂದು ಹೇಳಿದ ಹಾಗೆ ಕೇಳಿಸಿತು. ಹಾಗೆಯೇ ಅವರು ಅಲ್ಲಿಗೆಯ್ದಿ ವಿದ್ಯೆಕಲಿತರು. ಅವರು ಗುರುದಕ್ಷಿಣೆ ಯಾಗಿ ಸುವರ್ಣಕೋಟಿಯನ್ನು ಕೊಡಬೇಕಾಗಿತ್ತು. ಅದ ಕ್ಕಾಗಿ ಏನು ಮಾಡಬಹುದೆಂದು ಯೋಚಿಸುತ್ತ ಇರಲು ನಂದನು ಮೃತನಾದನು. ಕೂಡಲೆ ಇಂದ್ರದತ್ತನು ಯೋಗಸಿದ್ಧಿಯ

ಮೂಲಕ ರಾಜನ ದೇಹವನ್ನು ಪ್ರವೇಶಿಸಿ ವ್ಯಾಡಿಗೆ ಬೇಕಾದಷ್ಟು ಸುವರ್ಣವನ್ನು ಕೊಡಿಸಿದನು. (ಕಥಾಸರಿಸ್ಸಾಗರ ೩ನೆ ತರಂಗ)

೪೮. ಕಾರ್ತವೀರ್ಯಾರ್ಜುನನು ಚಂದ್ರವಂಶದ ಕೃತವೀರ್ಯನ ಮಗನು. ಒಮ್ಮೆ ರಾವಣನು ಕೆಚ್ಚಿನಿಂದ ಇವನಲ್ಲಿಗೆ ಬಂದು ಯುದ್ಧಮಾಡಿ ಸೋತು ಕಾರ್ತವೀರ್ಯನ ಬಂದಿಯಾದನು. ಆಗ ರಾವಣನ ತಂದೆಯಾದ ಪುಲಸ್ತ್ಯನು ಬಂದು ಯಾಚಿಸಿ ಮಗನನ್ನು ಬಿಡಿಸಿಕೊಂಡು ಹೋದನು. (ರಾ. ಉ. ೩೩)

೪೯. ಋಷ್ಯಶೃಂಗನು ಒಬ್ಬ ಮಹರ್ಷಿ. ವಿಭಾಂಡಕನೆಂಬ ಮುನಿ ಕೈಕಾಲು ತೊಳೆದುಕೊಳ್ಳುವುದಕ್ಕಾಗಿ ಮಡುವಿನಲ್ಲಿ ಇಳಿದಾಗ ಊರ್ವಶಿಯನ್ನು ನೋಡಿ ಮನಸ್ಸಿನಲ್ಲಿ ಸೋತನು. ಆಗ ಸ್ಖಲಿತವಾದ ವೀರ್ಯವು ಹರಿಣಿಯ ಗರ್ಭವನ್ನು ಸೇರಿ ಜನಿಸಿದವನು. ದಶರಥನ ಔರಸ ಪುತ್ರಿಯೂ ರೋಮಪಾದನ ಸಾಕುಮಗಳೂ ಆದ ಶಾಂತೆಯು ಈತನ ಹೆಂಡತಿ. ದಶರಥನು ಪುತ್ರಕಾಮೇಷ್ಟಿಮಾಡಿದಾಗ ಈತನನ್ನು ತರುಣಿಯರ ಮೂಲಕ ಬರಮಾಡಿಕೊಂಡನು. (ರಾಮಾಯಣ. ಬಾಲಕಾಂಡ. ೭೬ ಸರ್ಗ)

೫೦. ಪರಶುರಾಮನು ಭೃಗುವಂಶದ ಜಮದಗ್ನಿಮಹರ್ಷಿಯಿಂದ ರೇಣುಕೆಯಲ್ಲಿ ಜನಿಸಿದವನು. ಶ್ರೀರಾಮನು ಹರಧನುಸ್ಸನ್ನು ಭಂಗಿಸಿ ಸೀತಾಸ್ವಯಂವರವಾಗಿ ಅಯೋಧ್ಯೆಗೆ ಮರಳುತ್ತಿದ್ದಾಗ ಪರಶುರಾಮನು ಬಂದು ಇದಿರಿಸಿದನು. ಆಗ ರಾಮನು ಪರಶುರಾಮನ ಗರ್ವವನ್ನು ಭಂಗಿಸಿದನು.

(ರಾಮಾಯಣ. ಬಾಲಕಾಂಡ. ೭೬ ಸರ್ಗ)

೫೧. ಜರಾಸಂಧನು ಮಗಧದೇಶಾಧಿಪತಿಯಾದ ಬೃಹದ್ರಥರಾಜನ ಮಗನು. ಇವನು ಭೈರವೋಪಾಸಕನು. ಪುರುಷಮೇಧ ಮಾಡಬೇಕೆಂಬ ಉದ್ದೇಶದಿಂದ ೮೬ ಸಾವಿರ ರಾಜಪುತ್ರರನ್ನು ಸೆರೆಯಲ್ಲಿ ಇಟ್ಟಿದ್ದನು. ಕೃಷ್ಣನು ಭೀಮಾರ್ಜುನರೊಡನೆ ವಿಪ್ರವೇಶದಿಂದ ಹೋಗಿ ಯುದ್ಧದಲ್ಲಿ ಭೀಮನ ಮೂಲಕ ಇವನನ್ನು ನಾಶಗೊಳಿಸಿದನು. (ಭಾರತ. ಸಭಾಪರ್ವ. ೨೪ ಅಧ್ಯಾಯ)

೫೨. ವಾಲಿ ಇಂದ್ರನ ಮಗನು. ದೇವದಾನವರು ಸಮುದ್ರಮಥನ ಮಾಡುತ್ತಿದ್ದಾಗ ಬಳಲಿದ್ದರಿಂದ ವಿಷ್ಣುವು ಇಂದ್ರನ ಮೂಲಕ ಇವನನ್ನು ಬರಮಾಡಿಸಿ, ಇವನಿಗೆ ಇದಿರಾಗಿ ನಿಂತವನ ಸಾಮರ್ಥ್ಯದಲ್ಲಿ ಅರ್ಧಭಾಗ ಈತನಿಗೆ ಬರುವಂತೆ ವರವಿತ್ತು ದಿವ್ಯ ಕಾಂಚನಕಮಲಮಾಲೆಯನ್ನು ಕೊಡಿಸಿ ಮಥನ ಕಾರ್ಯದಲ್ಲಿ ದೇವತೆಗಳಿಗೆ ಸಹಾಯಮಾಡಲು ಹೇಳಿದನು. ಸುಗ್ರೀವನಿಗೆ ಅನ್ಯಾಯವೆಸಗಿದ ಈತನನ್ನು ರಾಮನು ಮರೆಯಲ್ಲಿ ನಿಂತು ವಧಿಸಿದನು. (ರಾಮಾಯಣ. ಕಿಷ್ಕಿಂಧಾಕಾಂಡ ೨೨. ಸರ್ಗ)

೫೩. ಶಂಬರನು ಶ್ರೀಕೃಷ್ಣನಿಂದ ರುಕ್ಮಿಣಿಯಲ್ಲಿ ಜನಿಸಿದ ಪ್ರದ್ಯುಮ್ನನಿಂದ ತನಗೆ ಮರಣವೆಂಬುದನ್ನು ತಿಳಿದು, ಜನಿಸಿದ ಏಳು ದಿನಗಳಲ್ಲೇ ಮಾಯಾರೂಪದಿಂದ ಬಂದು ಮಗುವನ್ನು ಅಪಹರಿಸಿಕೊಂಡುಹೋಗಿ ಸಮುದ್ರದಲ್ಲಿ ಹಾಕಿದನು. ಆ ಮಗುವನ್ನು ದೊಡ್ಡದೊಂದು ಮೀನು ನುಂಗಿತು. ಅದನ್ನು ಬೆಸ್ತರು ಹಿಡಿದು ಶಂಬರನ ಅರಮನೆಗೆ ಒಪ್ಪಿಸಿದರು. ಅಡುಗೆಯವರು ಮೀನನ್ನು ಕೊಯ್ಯಲು ಅದರಲ್ಲಿ ಕಂಡುಬಂದ ಮಗುವನ್ನು ಮಾಯಾವತಿಯಾದ ರತಿಯು ಪೋಷಿಸುವಳು. ಅವನು ಬಳೆದು ದೊಡ್ಡವನಾಗಲು ರತಿಯು ಅವನನ್ನು ಕಾಮಿಸಿದಳು.

(ಹರಿವಂಶ. ೨ ಪರ್ವ. ೧೦೪ ಅಧ್ಯಾಯ)

೫೪. ಸತೀವಿಯೋಗವಾದ ಮೇಲೆ ಶಿವನು ಸಮಾಧಿಯಲ್ಲಿದ್ದಾಗ, ಅವನು ಉಮೆಯನ್ನು ಒಲಿಸಿಕೊಳ್ಳುವಂತೆ ಮಾಡಬೇಕೆಂಬ ಲವಲವಿಕೆಯಿಂದ ದೇವತೆಗಳು ಮನ್ಮಥನನ್ನು ಪ್ರೋತ್ಸಾಹಿಸಿ ಅವನ ಸಮಾಧಿಯನ್ನು ಕೆಡಿಸುವುದಕ್ಕಾಗಿ ಕಳುಹಿಸಿದರು. ಅದೇ ಮೇರೆಗೆ ಇದಿರಿಸಲು ಹೋದವನು ಶಿವನ ಹಣೆಗಣ್ಣಿಂದ ಬೂದಿಯಾದನು. (ರಾಮಾಯಣ. ಬಾಲಕಾಂಡ. ೨೩ ಸರ್ಗ)

೫೫. ರುಕ್ಮಿಯು ಭೀಷ್ಮಕರಾಯನ ಹಿರಿಯ ಮಗನು. ಇವನು ವಿವಾಹಮಹೋತ್ಸವದಂದು ವಿನೋದಕ್ಕಾಗಿ ಬಲರಾಮನೊಂದಿಗೆ ಪಗಡೆಯಾಡಿ ಸೋತು, ತಾನೇ ಗೆದ್ದವನೆಂದು ಕೊಚ್ಚಿ

ಕೊಂಡನು. ಇದರಿಂದ ಕ್ರುದ್ಧನಾದ ಬಲರಾಮನು ಮರಳಿ ಹತ್ತುಕೋಟಿ ದ್ರವ್ಯವನ್ನು ಒಡ್ಡಿ ಆಡಿದನು. ಆಗಲೂ ಬಲರಾಮನೇ ಗೆದನು. ಆದರೂ ರುಕ್ಮಿ ಮಾತ್ರ ತಾನೇ ಗೆದ್ದವನೆಂದು ಬಾಯಿಬಡಿದುಕೊಂಡನು. ಆಗ ಆಕಾಶವಾಣಿಯು "ಬಲರಾಮನೇ ಈ ಪಣವನ್ನು ಗೆದ್ದವನು" ಎಂದು ನುಡಿಯಿತು. ಅಲ್ಲಿಗೂ ರುಕ್ಮಿ ಸುಮ್ಮನಾಗದೆ ಬಲರಾಮನನ್ನು ನಾನಾವಿಧವಾಗಿ ಜರೆದು ಮಾತಾಡಲಾಗಿ ಹಲಿಯು ಕ್ರುದ್ಧನಾಗಿ ದ್ಯೂತದ ಮಣೆಯಿಂದಲೇ ಹೊಡೆದು ರುಕ್ಮಿಯನ್ನು ಕೊಂದನು. ಆಗ ಹಲಿಯು ರುಕ್ಮಿಯ ಒತ್ತಾಸೆಗೆ ಬಂದವರೆಲ್ಲರನ್ನೂ ಶಿಕ್ಷಿಸಿದನು.

(ಹರಿವಂಶ. ಪರ್ವ ೨. ಅಧ್ಯಾಯ. ೧೦೪)

೫೬. ಇಂದ್ರದತ್ತನೆಂಬ ಬ್ರಾಹ್ಮಣನು ಪರಕಾಯಪ್ರವೇಶ ಮಾಡಿದ ರಹಸ್ಯವನ್ನು ಊಹಿಸಿ ತಿಳಿದ ರಾಜನು ಶಕಟಾಲನೆಂಬ ಮುಖ್ಯ ಮಂತ್ರಿಯು ಇಂದ್ರದತ್ತನ ಶವವನ್ನು ಹೊತ್ತಿಸಿದುದಕ್ಕಾಗಿ ಮುನಿದು —"ಜೀವವಿದ್ದ ಬ್ರಾಹ್ಮಣನನ್ನು ಹೊತ್ತಿಸಿದನು" ಎಂಬ ಅಪವಾದ ಹೊರಿಸಿ ಮಂತ್ರಿಯನ್ನು ಅವನ ಮಕ್ಕಳೊಂದಿಗೆ ಹೊಟ್ಟುಬಾವಿಗೆ ತಳ್ಳಿಸಿದನು. (ಕಥಾಸರಿತ್ಸಾಗರ ೫ನೇ ತರಂಗ)

೫೭. ಪ್ರಹ್ಲಾದನು ವಿಷ್ಣುಭಕ್ತನಾಗಿದ್ದುದರಿಂದ ತಂದೆಯಾದ ಹಿರಣ್ಯಕಶಿಪುವು ಮಗನನ್ನು ಕುರಿತು "ನನ್ನ ವೈರಿಯಾದ ವಿಷ್ಣುವನ್ನು ನೀನು ಭಜಿಸುವುದು ಸರಿಯಲ್ಲ"ವೆಂಬುದಾಗಿ ತಿಳಿಯಹೇಳಿದನು. ತಾನೆಷ್ಟು ಹೇಳಿದರೂ ಕೇಳದ ಮಗನನ್ನು ಕೊಂದಲ್ಲದೆ ತೀರದೆಂದು ನಾನಾವಿಧವಾಗಿ ಶಿಕ್ಷಿಸಿದನು. ಕಡೆಗೆ ಮಗನನ್ನು ಕೊಲ್ಲುವುದಕ್ಕಾಗಿ ಖಡ್ಗವನ್ನೆತ್ತಿದನು. ಆಗ ಹರಿಯು ನೃಸಿಂಹಾವತಾರವೆತ್ತಿ ಸಭಾಮಂಟಪದ ಕಂಭದಿಂದ ಬಂದು ದೈತ್ಯನನ್ನು ಸಂಹರಿಸಿದನು. (ಭಾಗವತ. ೭--೩)

೫೮. ನಹುಷನು ಚಂದ್ರವಂಶದ ಆಯುರಾಜನ ಮಗನು. ದೇವೇಂದ್ರನು ವೃತ್ರಾಸುರವಧೆಯಿಂದ ಬ್ರಹ್ಮಹತ್ಯಾಪಾತಕಕ್ಕೆ ಗುರಿಯಾಗಿ ಅದನ್ನು ಪರಿಹರಿಸಿಕೊಳ್ಳಲು ಹೋಗಿದ್ದಾಗ, ದೇವತೆಗಳ

ಕೋರಿಕೆಯಂತೆ ಬ್ರಹ್ಮನು ಈ ನಹುಷನನ್ನು ಇಂದ್ರಪದವಿಗೆ ಏರಿಸಿದನು. ಇಂದ್ರನು ಪ್ರಯಾಸದಿಂದ ದೋಷವನ್ನು ಪರಿಹರಿಸಿಕೊಂಡು ಬಂದ ವೇಳೆಗೆ ಸರಿಯಾಗಿ ದುರ್ದೈವವಶದಿಂದ ನಹುಷನು ಶಚಿಯನ್ನು ಕೂಡಬೇಕೆಂದು ಬಯಸಿ ಆಕೆಗೆ ಹೇಳಿ ಕಳುಹಿದನು. ಅದಕ್ಕವಳು "ಆಗಬಹುದು! ಆದರೆ, ನೀನು ಅಪೂರ್ವವಾದ ವಾಹನದಲ್ಲಿ ಕುಳಿತು ಬರಬೇಕು" ಎಂದು ಹೇಳಿಕಳುಹಿದಳು. ಆದುದರಿಂದ ತಾನು ಕುಳಿತ ಪಾಲಕಿಯನ್ನು ಸಪ್ತರ್ಷಿಗಳಿಂದ ಹೊರಿಸುತ್ತ ಸಂಭ್ರಮದಿಂದ ನಹುಷನು ಹೊರಟನು. ಆಗ ಕುಳ್ಳನಾಗಿ ಕುಂಟುತ್ತಿದ್ದ ಅಗಸ್ತ್ಯನನ್ನು ಬೇಗನೆ ನಡೆಯೆಂದು ಗದರಿಸಿ ಉಗುಳಿಬಿಟ್ಟನು. ಅಗಸ್ತ್ಯನು ಕ್ರುದ್ಧನಾಗಿ "ನೀನು ಸರ್ಪವಾಗಿ ಬೀಳು" ಎಂದು ಶಪಿಸಿದನು.

(ಭಾರತ. ಆರಣ್ಯಪರ್ವ. ೧೮೦ ಅಧ್ಯಾಯ)

೬೦. ವಿದುರನ ನೀತಿ. (ಭಾರತ. ಉದ್ಯೋಗಪರ್ವ ೩೪–೪೦ ಅಧ್ಯಾಯ)

೬೧. ಅಗ್ನಿದೇವನಿಗೆ ಮಹಾಮಹಿಮನಾದ ಶ್ವೇತಕಿರಾಜನು ಹನ್ನೆರಡು ವರ್ಷಗಳ ತನಕ ಬಿಡದೆ ನಡೆಯಿಸಿದ ಯಾಗದಲ್ಲಿ ಸುರಿದ ಆಜ್ಯಧಾರೆಗಳನ್ನೂ ಇತರ ಹವಿಸ್ಸುಗಳನ್ನೂ ಉಂಡುಂಡು ಅಜೀರ್ಣವ್ಯಾಧಿಯುಂಟಾಗಲು, ಅದರ ಪರಿಹಾರಕ್ಕಾಗಿ ಬ್ರಹ್ಮನು ಖಾಂಡವವನವನ್ನು ದಹಿಸುವುದಾಗಿ ಸೂಚಿಸಿದನು.

(ಭಾರತ. ಆದಿಪರ್ವ. ೨೪೯. ಅಧ್ಯಾಯ)

೬೨. ಕುಂಭಕರ್ಣನು ಜನಿಸುವಾಗಲೇ ಪರ್ವತಾಕಾರನಾಗಿ ಭಯಂಕರವಾದ ರೂಪದಿಂದಿದ್ದು ಸಾವಿರಾರು ಮಂದಿಯನ್ನು ನುಂಗಿದನು. ಇಂದ್ರನನ್ನು ಹೊಡೆದೋಡಿಸಿದನು. ಉಗ್ರತಪಸ್ಸಿನಿಂದ ಬ್ರಹ್ಮನನ್ನುಮೆಚ್ಚಿಸಿ ನಿರ್ದೇವತ್ವೇಚ್ಛೆಯುಳ್ಳವನಾಗಿದ್ದರೂ ತಪ್ಪಾಗಿ ನಿದ್ರೆಯನ್ನೇ ಕೇಳಿಕೊಂಡನು. ಕೊನೆಗೆ ಯುದ್ಧದಲ್ಲಿ ಹತನಾಗಿ ಸದ್ಗತಿಯನ್ನೈದಿದನು.

(ರಾಮಾಯಣ. ಯುದ್ಧಕಾಂಡ. ೬೦, ೬೭.)

೬೬. ಚಾಣಕ್ಯನು ನೀತಿಪಾರಂಗತನಾದ ಬ್ರಾಹ್ಮಣನು. ನವನಂದರಿಂದ ಸತ್ರದಲ್ಲಿ ತನಗೆ ಅವಮರ್ಯಾದೆಯಾದುದಕ್ಕಾಗಿ ಏಳು ದಿನಗಳಲ್ಲೇ ಅವರನ್ನು ಸಂಹರಿಸದೆ ಶಿಖೆಯನ್ನು ಬಂಧಿಸಲಾರೆನೆಂದು ಪ್ರತಿಜ್ಞೆಮಾಡಿ ಅವರೆಲ್ಲರನ್ನೂ ತಂತ್ರದ ಬಲದಿಂದಲೇ ಸಂಹರಿಸಿ ಚಂದ್ರಗುಪ್ತನಿಗೆ ಪಟ್ಟಾಭಿಷೇಕಮಾಡಿದನು.

(ಕಥಾಸರಿತ್ಸಾಗರ. ಪಂಚಮತರಂಗ.)

೬೭. ವೇದವತಿಯು ಬೃಹಸ್ಪತಿಸುತನಾದ ಕುಶಧ್ವಜನ ಮಗಳು. ಇವಳು ನಾರಾಯಣನನ್ನೇ ಮದುವೆಯಾಗುವ ನಿಮಿತ್ತದಿಂದ ತಪಸ್ಸುಮಾಡುತ್ತಿದ್ದಳು. ದಿಗ್ವಿಜಯಕ್ಕೆ ಹೊರಟ ರಾವಣನು ಅವಳನ್ನು ನೋಡಿ ಪರಿಭವಿಸತೊಡಗಲು ಅವಳು ಕ್ರೋಧಪರವಶಳಾಗಿ "ಎಲಾ! ನಾನು ಈ ಜನ್ಮದಲ್ಲಿ ಏನೂ ಪಾಪವನ್ನು ಆರ್ಜಿಸದವಳಾದರೆ ಮುಂದಣ ಭವದಲ್ಲಿ ಅಯೋನಿಜೆಯಾಗಿ ಜನಿಸಿ ನಿನ್ನನ್ನು ಕೊನೆಗಾಣಿಸುವೆನು ಎಂದು ಶಾಪವಿತ್ತು ಅಗ್ನಿಪ್ರವೇಶಮಾಡಿ ಸೀತೆಯಾಗಿ ಜನಿಸಿದಳು.

(ರಾಮಾಯಣ. ಉತ್ತರ. ೧೭ ಸರ್ಗ)

೬೮. ಶ್ರೀರಾಮಚಂದ್ರನು ವಿಶ್ವಾಮಿತ್ರನಿಂದ ಎಲ್ಲಾ ತರದ ಅಸ್ತ್ರೋಪದೇಶಗಳನ್ನೂ ಪಡಕೊಂಡನು. (ರಾಮಾಯಣ ಬಾಲ. ೨೭ ಸರ್ಗ)

೬೯. ದ್ರುಪದನು ಪಾಂಚಾಲದೇಶದ ಅರಸನು. ಸೋಮವಂಶದ ಪೃಷದನೆಂಬ ರಾಜನು ತಪೋನಿರತನಾಗಿದ್ದಾಗ ಅವನ ನಿಯಮವನ್ನು ಭಂಗಗೊಳಿಸಲು ಅಲ್ಲಿಗೆ ಬಂದು ಮೇನಕೆಯನ್ನು ನೋಡಿ ಎದೆಗುಂದಿದನು. ಗಂಡುಮಗು ಜನಿಸಿತು. ಕೂಡಲೆ ಆ ಶಿಶುವನ್ನು ಒಂದು ಮರದ ಬುಡದಲ್ಲಿರಿಸಿ ಪೃಷದನು ತಪಸ್ಸಿಗಾಗಿ ಹೊರಟುಹೋದನು. ಭರದ್ವಾಜಮುನಿಯ ತಮ್ಮ ಅಗ್ನಿವೇಶ್ಯಮಹರ್ಷಿಯು ಶಿಶುವನ್ನು ನೋಡಿ ಆಶ್ರಮಕ್ಕೆ ಕರತಂದು ಮರದ ಬುಡದಲ್ಲಿ ದೊರೆತುದರಿಂದ ದ್ರುಪದನೆಂದು ಹೆಸರಿಟ್ಟು ಪೋಷಿಸಿದನು. ಅಣ್ಣನ ಮಗನಾದ ದ್ರೋಣನೊಂದಿಗೆ ಇವನಿಗೂ ವಿದ್ಯಾಭ್ಯಾಸವಾಯಿತು. ಪೃಷದನ ತರು

ವಾಯು ದ್ರುಪದನಿಗೆ ಪಟ್ಟವಾಯಿತು. ಒಮ್ಮೆ ದ್ರೋಣಾಚಾರ್ಯನು ಧನಾಭಿಲಾಷೆಯಿಂದ ಈತನ ಬಳಿಗೆ ಹೋಗಿ ತಿರಸ್ಕಾರ ಹೊಂದಿ ತನ್ನ ಶಿಷ್ಯನಾದ ಅರ್ಜುನನ ಮೂಲಕ ಅವನನ್ನು ಹಿಡಿದು ತರಿಸಿದನು. (ಭಾರತ. ಆದಿಪರ್ವ ೧೪೮ ಅಧ್ಯಾಯ)

೭೨. ಲೋಮಶನು ಒಬ್ಬ ಬ್ರಹ್ಮರ್ಷಿಯು. ಅರ್ಜುನನು ಪಾಶುಪತಾಸ್ತ್ರವನ್ನು ಪಡೆದ ಬಳಿಕ ಸ್ವರ್ಗಕ್ಕೆ ಹೋಗಿದ್ದಾಗ, ಇಂದ್ರನು ಇವನ ಮೂಲಕ ಅರ್ಜುನನ ಕುಶಲವಾರ್ತೆಯನ್ನು ಯುಧಿಷ್ಠಿರನಿಗೆ ಹೇಳಿಕಳುಹಿಸಿದನು. ಪಾಂಡವರ ಅರಣ್ಯವಾಸದಲ್ಲಿ ಈತನು ಯುಧಿಷ್ಠಿರನನ್ನು ಸಂಗಡ ಕರೆದುಕೊಂಡು ಹೋಗಿ ಅನೇಕತೀರ್ಥಗಳನ್ನು ಸುತ್ತಿ ಅವುಗಳ ಮಹಿಮೆಯನ್ನು ವರ್ಣಿಸಿದನು. (ಭಾರತ. ಆರಣ್ಯಪರ್ವ ೯೦)

೭೩. ಅರ್ಜುನನು ದೇವಲೋಕದಲ್ಲಿ ಚಿತ್ರಸೇನನಿಂದ ಗಾಂಧರ್ವವಿದ್ಯೆಯನ್ನು ಕಲಿತುಕೊಂಡನು. ವೈರಿಸಂಹಾರದಿಂದ ಸಂತುಷ್ಟನಾದ ಇಂದ್ರನು ತನ್ನ ಸಿಂಹಾಸನದಲ್ಲಿ ಅರ್ಜುನನನ್ನು ಕುಳ್ಳಿರಿಸಿ ಸಂಭಾವಿಸಿದನು. ಅನಂತರ ತನ್ನ ಕೋರಿಕೆಯನ್ನು ನಿರಾಕರಿಸಿದುದಕ್ಕಾಗಿ ಊರ್ವಶಿಯು ಅರ್ಜುನನನ್ನು ಶಪಿಸಿದಳು. ವಿರಾಟನಗರಿಯಲ್ಲಿ ಬೃಹನ್ನಳೆಯಾಗಿ ಪಾರ್ಥನು ಉತ್ತರೆಗೆ ಸಂಗೀತಾಚಾರ್ಯನಾಗಿದ್ದು ಊರ್ವಶಿಯ ಶಾಪವನ್ನೂ ಅಜ್ಞಾತವಾಸವನ್ನೂ ಕಳೆದುಕೊಂಡನು.

(ಭಾರತ. ವಿರಾಟ ಪ. ೧೩ ಅಧ್ಯಾಯ)

೭೪. ಜನಕನು ರಾಜರ್ಷಿಯು. ಕ್ಷತ್ರಿಯನು ಪ್ರಜಾಪಾಲನೆಯನ್ನು ಅವಶ್ಯವಾಗಿ ಮಾಡಲೇಬೇಕು. ಜ್ಞಾನವನ್ನು ಸಂಪಾದಿಸಿದ ಮಾತ್ರದಿಂದಲೇ ಕ್ಷತ್ರಿಯಧರ್ಮವನ್ನು ಬಿಡಲಾಗದೆಂದು ಆತನು ವಾದಿಸಿರುವನು. (ಭಾರತ. ಶಾಂತಿಪರ್ವ ೧೮ ಅಧ್ಯಾಯ)

೭೫. ಸಂವರ್ತನೆಂಬ ಋಷಿಯು ಆಂಗಿರಸನ ಮಗನು. ಉಚಥ್ಯಬೃಹಸ್ಪತಿಗಳಿಬ್ಬರೂ ಇವನ ಸಹೋದರರು. ಈತನು ಬೃಹಸ್ಪತಿಯ ಬಾಧೆಯನ್ನು ತಡೆಯಲಾರದೆ ಅರಣ್ಯಕ್ಕೆ ಹೋದನು.

ಇವನು ಮರುತ್ತನ ಯಜ್ಞವನ್ನು ಮಾಡಿಸಿದನು. ಮೊದಲು ಮರುತ್ತನು ಬೃಹಸ್ಪತಿಯನ್ನು ಯಾಗಮಾಡಿಸಲು ಕರೆದಾಗ ಇಂದ್ರನು ಗುರುವನ್ನು ಹೋಗಬಾರದೆಂದು ತಡೆದನು. ಸಂವರ್ತನು ಯಾಗಮಾಡಿಸಲು ಒಪ್ಪಿಕೊಂಡಮೇಲೆ ಬೃಹಸ್ಪತಿಯು ತಾನೇ ಮಾಡಿಸುವೆನೆಂದು ಬಂದು ಅವಮಾನಹೊಂದಿದನು. ಆಗ ಇಂದ್ರನ ಪೌರುಷವೇನೂ ಸಂವರ್ತನ ಮಂತ್ರಬಲದ ಮುಂದೆ ಸಾಗಲಿಲ್ಲ. (ಭಾರತ. ಸಭಾಪರ್ವ. ೭—೮ ಅಧ್ಯಾಯ)

೭೬. ಚಂದ್ರನು ಬೃಹಸ್ಪತ್ಯಾಚಾರ್ಯನಲ್ಲಿ ವಿದ್ಯಾಭ್ಯಾಸಮಾಡುತ್ತಿದ್ದನು. ಅವನೊಮ್ಮೆ ರಾಜಸೂಯಯಾಗಮಾಡಿ ಅವಭೃಥಸ್ನಾನದಿಂದ ಶೋಭಿಸುತ್ತಿರಲು, ಆಂಗಿರಸುತೆಯೂ, ಗುರುಪತ್ನಿಯೂ ಆದ ತಾರೆಗೂ ಅವನಿಗೂ ಮೋಹವಂಕುರಿಸಿತು. ಬೃಹಸ್ಪತಿಯಿಲ್ಲದ ಸಮಯದಲ್ಲಿ ಅವನು ತಾರೆಯನ್ನು ಅಪಹರಿಸಿದನು. ಗುರು ಬ್ರಹ್ಮನಲ್ಲಿ ಮೊರೆಯಿಟ್ಟನು. ಅವಳನ್ನು ಬೃಹಸ್ಪತಿಗೆ ಒಪ್ಪಿಸುವಂತೆ ಬ್ರಹ್ಮನು ವಿಧಿಸಿದನು. ಆದರೆ ಅವಳು ಚಂದ್ರನಿಂದ ಗರ್ಭವನ್ನು ಧರಿಸಿದ್ದ ಕಾರಣ ಮಗುವಿನ ಸಂಗತಿಯಲ್ಲಿ ಇಬ್ಬರಿಗೂ ವಿವಾದವುಂಟಾಗಲು, ಬ್ರಹ್ಮನು ಅವಳ ಮೂಲಕ ವಿಷಯವನ್ನು ತಿಳಿದು ಮಗು ಚಂದ್ರನಿಗೇ ಸೇರತಕ್ಕದ್ದೆಂದು ನಿಷ್ಕರ್ಷೆಮಾಡಿದನು. ಹಾಗೆ ಜನಿಸಿದವನೇ ಬುಧನು. (ಹರಿವಂಶ. ಪ್ರಥಮ ಪರ್ವ. ೨೫)

೭೭. ಮಹಾಪ್ರಭುವಾದ ಚಂಡಮಹಾಸೇನನು ಪುತ್ರಿಯಾದ ವಾಸವದತ್ತೆಗೆ ವೀಣೆಕಲಿಸಿಕೊಡಬೇಕೆಂದು ವತ್ಸರಾಜನಿಗೆ ಹೇಳಿಕಳುಹಿದನು. ಬೇಕಾದರೆ ನನ್ನಲ್ಲಿಗೆ ಮಗಳನ್ನು ಕಳುಹಿಸಲಿ; ನಾನು ಅಲ್ಲಿಗೆ ಬರಲಾರೆನು ಎಂದು ವತ್ಸನು ಬದಲು ಹೇಳಿಕಳುಹಿದನು. ಹೀಗೆ ತಿರಸ್ಕಾರವಾದುದನ್ನು ಸಹಿಸಲಾರದೆ ಚಂಡಮಹಾಸೇನನು ಮಂತ್ರಿಯೊಡನೆ ಯೋಚಿಸಿ ಯಾಂತ್ರಿಕ ಮಹಾಗಜವೊಂದನ್ನು ರಚಿಸಿ, ಅದರೊಳಗೆ ವೀರಭಟರನ್ನು ನಿಲ್ಲಿಸಿ ವಿಂಧ್ಯಾಟವಿಯಲ್ಲಿ ಸಂಚರಿಸುವ ಹಾಗೆ ಮಾಡಿದನು.

ಮದಗಜವಿರುವುದೆಂಬ ಸಂಗತಿಯನ್ನು ಕೇಳಿ ವತ್ಸನು ವೀಣಾವಾದನ ಚಾತುರ್ಯದಿಂದಲೇ ಅದನ್ನು ಹಿಡಿದು ತರುವೆನೆಂದು ಹೋಗಿ ಘೋಷವತಿಯೆಂಬ ವೀಣೆಯನ್ನು ನುಡಿಸುತ್ತ ವೈರಿಗಳ ಕೈಯಲ್ಲಿ ಸಿಕ್ಕಿಬಿದ್ದನು. (ಕಥಾಸರಿತ್ಸಾಗರ. ದ್ವಾದಶ ತರಂಗ)

೭೮. ಸೂರ್ಯನು ಕಶ್ಯಪನಿಂದ ಅದಿತಿಯಲ್ಲಿ ಜನಿಸಿದವನು. ಇವನು ತ್ವಷ್ಟೃವಿನ ಮಗಳಾದ ಸಂಜ್ಞಾದೇವಿಯನ್ನು ಮದುವೆಯಾಗಿ ಯಮ, ಮನು, ಯಮುನೆಯರೆಂಬ ಮೂವರು ಮಕ್ಕಳನ್ನು ಪಡೆದನು. ಸಂಜ್ಞಾದೇವಿಯು ಸೂರ್ಯನ ತೇಜಸ್ಸನ್ನು ಸಹಿಸಲಾರದೆ ತಂದೆಯ ಮನೆಗೆ ಹೋಗುವೆನೆಂದು ಕೇಳಿಕೊಂಡು ಹೋಗಲು ತಂದೆಯು ಅವಳನ್ನು ನಿರಾಕರಿಸಿದನು. ಆ ಮೇಲೆ ಉತ್ತರಕುರುದೇಶದ ಹುಲ್ಲುಗಾವಲುಗಳಲ್ಲಿ ಸಂಚರಿಸುತ್ತ ತಪಸ್ಸುಮಾಡುತ್ತಿದ್ದಳು. ಹೀಗಿರಲು ಸೂರ್ಯನು ತೇಜೋರೂಪವನ್ನು ಪರಿವರ್ತನೆಗೊಳಿಸಿ ಸಂಜ್ಞಾದೇವಿಯ ಪ್ರತಿಬಿಂಬವಾದ ಛಾಯಾದೇವಿಯಲ್ಲಿ ಸಾವರ್ಣಿಶನೈಶ್ಚರರೆಂಬ ಮಕ್ಕಳನ್ನು ಪಡೆದನು. ಸಂಜ್ಞಾದೇವಿಯು ಕುದುರೆಯ ರೂಪದಿಂದಿದ್ದಾಗ ಈತನಿಂದ ಅಶ್ವಿನೀದೇವತೆಗಳು ಜನಿಸಿದರು.

(ಹರಿವಂಶ. ಪ್ರಥಮ ಪರ್ವ. ೯.)

೮೦. ಅರ್ಜುನನು ಗೀತಾರ್ಥವನ್ನು ಮರೆತ ಸಂಗತಿಯು ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ಪ್ರಸಿದ್ಧವು.

೮೧. ಶಲ್ಯನು ಕರ್ಣನ ಸಮುತ್ಸಾಹವನ್ನು ಭಂಗಿಸುವುದಕ್ಕಾಗಿ ತೇಜೋವಧೆಮಾಡಿದುದು ಭಾರತ ಕರ್ಣಪರ್ವ ಮೂವತ್ತೇಳನೇ ಅಧ್ಯಾಯದಲ್ಲಿ ಪ್ರಸಿದ್ಧವಾದುದು.

೮೨. ಚಂದ್ರನು ದಕ್ಷಪುತ್ರಿಯಲ್ಲಿ ಅಶ್ವನಿ ಮೊದಲಾದ ಇಪ್ಪತ್ತೇಳು ಮಂದಿಯನ್ನೂ ಮದುವೆಯಾದನು. ಆದರೆ ರೋಹಿಣಿಯೆಂಬವಳಲ್ಲಿ ಮಾತ್ರ ಲೋಲುಪನಾಗಿದ್ದುದನ್ನು ಮಿಕ್ಕವರೆಲ್ಲರೂ ತಂದೆಯೊಡನೆ ದೂರಿಕೊಂಡರು. ಚಂದ್ರನಿಗೆ ಕ್ಷಯರೋಗ ಬರುವ ಹಾಗೆ ದಕ್ಷನು ಶಾಪವಿತ್ತನು. ಅದನ್ನರಿತು ಚಂದ್ರನು

ಭಯಪಟ್ಟು ಶಿವನಲ್ಲಿ ಮೊರೆಯಿಟ್ಟನು. ಶಿವನು ಅಭಯ ವಿತ್ತುದನ್ನು ತಿಳಿದು ದಕ್ಷನು ಶಿವನಲ್ಲಿಗೆ ಬಂದು ಚಂದ್ರನನ್ನು ದೂರಿ ಆತನನ್ನು ತನ್ನ ವಶಕ್ಕೆ ಕೊಡಬೇಕೆಂದು ಕೇಳಿದನು. ಶರಣಾಗತರನ್ನು ಬಿಡಲಾರೆನೆಂದು ಶಿವನು ಹೇಳಲು ಆತನಿಗೂ ಶಾಪಕೊಡುವುದರಲ್ಲಿದ್ದನು. ಆಗ ಬ್ರಹ್ಮವಿಷ್ಣುಗಳು ಅಲ್ಲಿಗೆ ಬಂದು ಚಂದ್ರನನ್ನು ಎರಡು ಭಾಗವಮಾಡಿ ಒಂದು ಭಾಗಕ್ಕೆ ವೃದ್ಧಿಕ್ಷಯುಗಳಿಲ್ಲದಂತೆಮಾಡಿ ಆ ಭಾಗವನ್ನು ಶಿವನಿಗೆ ಅರ್ಪಿಸಿದರು. ವೃದ್ಧಿಕ್ಷಯುಗಳಿಂದ ಕೂಡಿದ ಮತ್ತೊಂದು ಭಾಗವನ್ನು ನಕ್ಷತ್ರಗಳಿಗೆ ಕೊಟ್ಟರು. (ಲಿಂಗಪುರಾಣ. ೫೮—೫೯)

೮೬. ದೇವಯಾನಿಯು ಶುಕ್ರಾಚಾರ್ಯನ ಮಗಳು. ಶರ್ಮಿಷ್ಠೆ ರಾಕ್ಷಸ ರಾಜನಾದ ವೃಷಪರ್ವನ ಮಗಳು. ಯಯಾತಿ ಚಂದ್ರವಂಶದ ನಹುಷನ ಮಗನು. ಕಚನು ದೇವಯಾನಿಯನ್ನು ಕುರಿತು "ಯಾವ ಬ್ರಾಹ್ಮಣಕುಮಾರನೂ ನಿನ್ನನ್ನು ಮದುವೆಯಾಗದಿರಲಿ" ಎಂದು ಶಪಿಸಿದ ಕಾರಣ ಕ್ಷತ್ರಿಯನಾದ ಯಯಾತಿಗೆ ದೇವಯಾನಿಯನ್ನು ಕೊಡಬೇಕಾಯಿತು. ಅವಳ ದಾಸ್ಯವನ್ನು ಅಂಗೀಕರಿಸಿ ಒಟ್ಟಿಗೆ ಬಂದಿದ್ದ ಶರ್ಮಿಷ್ಠೆಯನ್ನು ಯಯಾತಿಯು ಕಾಮಿಸಿದುದರ ಫಲವಾಗಿ ಮುದುಕನಾಗುವಂತೆ ಶುಕ್ರಾಚಾರ್ಯನಿಂದ ಶಾಪಹೊಂದಿ ಬಹುಕಷ್ಟಕ್ಕೆ ಗುರಿಯಾದನು.

(ಭಾರತ. ಆದಿಪರ್ವ. ೬೩—೭೭ ಅಧ್ಯಾಯ)

೮೭. ರಾವಣನು ಪುಷ್ಪಕವಿಮಾನವನ್ನೇರಿ ಶರವಣದ ಕಡೆಗೆ ಹೋಗುತ್ತಿರಲು ಪುಷ್ಪಕವು ಅಲ್ಲೇ ನಿಂತು ಹೋಯಿತು. ಅಲ್ಲಿಗೆ ಬರಕೂಡದೆಂದು ತಡೆದ ನಂದಿಯ ಕಪಿಮುಖವನ್ನು ನೋಡಿ ರಾವಣನು ಪರಿಹಾಸಮಾಡಿದನು. ಆಗ ನಂದಿಯು "ಎಲಾ ನೀಚನೇ ಕಪಿಮುಖಮುಳ್ಳವನನ್ನು ನೋಡಿ ನಗಾಡಿದ್ದರಿಂದ ನಿನ್ನ ವಧೆಗಾಗಿ ನನ್ನಂತಹ ಕಪಿವೀರರು ಜನಿಸುವರು! ನಿನ್ನ ಕುಲವೇ ಸಂಹಾರವಾಗುವುದು ಎಂದು ಶಪಿಸಿದನು.

(ರಾಮಾಯಣ. ಉತ್ತರಕಾಂಡ. ೧೬ ಸರ್ಗ)

೮೮. ಬಲರಾಮನಿಗೆ ದುರ್ಯೋಧನನ ಮೇಲೆ ವಿಶೇಷವಾದ ಅಭಿಮಾನವಿತ್ತು. ಭಾರತಯುದ್ಧದಲ್ಲಿ ಯಾರಿಗೂ ಸಹಾಯ ಮಾಡಲೊಲ್ಲದೆ ತೀರ್ಥಯಾತ್ರೆಗೆ ಹೊರಟು ಒಂದು ಸಂವತ್ಸರ ಕಾಲ ಭೂಪ್ರದಕ್ಷಿಣೆಮಾಡಿದನು.

(ಭಾರತ. ಉದ್ಯೋಗಪರ್ವ. ೧೫೭ ಅಧ್ಯಾಯ)

೯೧. ಇಂದ್ರಜಿತು ನಿಕುಂಭಿಳಾಯಾಗಮಾಡಿ ಮಾಯಾ ಸೀತೆಯನ್ನು ಕಲ್ಪಿಸಿ ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಯುದ್ಧಭೂಮಿಗೆ ಕರತಂದು ಅವಳನ್ನು ಕೊಂದು ಸುಗ್ರೀವಾದಿಕಪಿವೀರರನ್ನು ಸಂಕಟಪಡಿಸಿದನು. ಬಳಿಕ ನಿಕುಂಭಿಳಾಯಾಗ ಮಾಡುತ್ತಿದ್ದ ಇಂದ್ರಜಿತುವಿನ ಮಾಯಾಜಾಲವನ್ನು ಅರಿತಿದ್ದ ವಿಭೀಷಣನು ರಹಸ್ಯವಾಗಿ ರಾಮನಿಗೆ ಸಂಗತಿಯನ್ನುತಿಳಿಸಲು, ರಾಮನ ಸೂಚನೆಯಂತೆ ಲಕ್ಷ್ಮಣನು ಇಂದ್ರಜಿತುವನ್ನು ಸಂಹರಿಸಿದನು. (ರಾಮಾಯಣ. ಯುದ್ಧಕಾಂಡ. ೮೬, ೯೨)

೯೩. ಇಲ್ವಲವಾತಾಪಿಯರೆಂಬ ಸಹೋದರರಿಬ್ಬರೂ ಹಿರಣ್ಯಕಶಿಪುವಿನ ಸೋದರಳಿಯಂದಿರು. ಮಣಿಮತಿಯೆಂಬ ಪಟ್ಟಣವು ಇವರ ರಾಜಧಾನಿ. ಅವರಿಬ್ಬರೂ ತಮಗೆ ಇಂದ್ರಸಮಾನನಾದ ಮಗನಾಗಬೇಕೆಂದು ತಮ್ಮನ್ನು ಅನುಗ್ರಹಿಸುವಂತೆ ಬ್ರಾಹ್ಮಣರನ್ನು ಬೇಡಿ ತಮ್ಮ ಇಷ್ಟಾರ್ಥವು ಕೈಗೂಡದಿದ್ದ ಕಾರಣ ಬ್ರಾಹ್ಮಣರನ್ನು ಪೀಡಿಸತೊಡಗಿದರು. ಇಲ್ವಲನು ವಾತಾಪಿಯನ್ನು ಮೇಕೆಯನ್ನಾಗಿ ಮಾಡಿಕೊಂಡು ಆ ಮಾಂಸವನ್ನು ಬ್ರಾಹ್ಮಣರಿಗೆ ಅಡುಗೆಮಾಡಿ ಬಡಿಸಿ, ಅವರು ತಿಂದ ಬಳಿಕ "ವಾತಾಪಿ! ಹೊರಗೆ ಬಾ!" ಎಂದು ಕರೆಯುತ್ತಿದ್ದನು. ಕೂಡಲೆ ವಾತಾಪಿ ಅವರ ಹೊಟ್ಟೆಯನ್ನು ಸೀಳಿಕೊಂಡು ಹೊರಡುತ್ತಿದ್ದನು. ಹೀಗೆ ಅನೇಕಮಂದಿ ಬ್ರಾಹ್ಮಣರು ಸತ್ತರು. ಒಮ್ಮೆ ಅಗಸ್ತ್ಯನು ಧನಾಪೇಕ್ಷೆಯಿಂದ ಇಲ್ವಲನಲ್ಲಿಗೆ ಬಂದಿದ್ದಾಗ ಇಲ್ವಲನು ಮೊದಲಿನಂತೆಯೇ ಮಾಡಿದನು. ಇವನ ಗುಟ್ಟನ್ನು ತಿಳಿದ ಅಗಸ್ತ್ಯನು "ವಾತಾಪಿ! ಹೊಟ್ಟೆಯಲ್ಲೇ

ಜೀರ್ಣವಾಗಿ ಬಿಡು! ಎಂದನು. ವಾತಾಪಿ ಅಲ್ಲೇ ಜೀರ್ಣವಾದನು. ಇಲ್ವಲನು ಹೆದರಿ ಅಗಸ್ತ್ಯನನ್ನು ಮರೆಹೊಕ್ಕು ದ್ರವ್ಯರಾಶಿಯನ್ನಿತ್ತನು. ಅಂದಿನಿಂದ ಅವನು ಬ್ರಹ್ಮದ್ವೇಷವನ್ನು ಬಿಟ್ಟುಬಿಟ್ಟನು. (ಭಾರತ. ಅರಣ್ಯಪರ್ವ. ೯೬–೯೭ ಅಧ್ಯಾಯ)

೯೯. ಭೀಷ್ಮನು ತನಗೆ ಶ್ರೇಯಸ್ಸು ಉಂಟಾಗುವಂತೆ ಕೃಷ್ಣನನ್ನು ಪ್ರಾರ್ಥಿಸಿದನು. ಅದನ್ನು ಕೃಷ್ಣನು ಅನುಮೋದಿಸಿದನು. (ಭಾರತ. ಶಾಂತಿಪರ್ವ. ೪೭–೪೯ ಅಧ್ಯಾಯ)

—o—

## — ಒಪ್ಪೋಲೆ —

| ಪದ್ಯ ಸಂಖ್ಯೆ. | ತಪ್ಪು | ಒಪ್ಪು |
|---|---|---|
| ೧೭ | ತನಜ | ತನುಜ |
| ೩೭ | ಪೊಜಿಸು | ಪೂಜಿಸು |
| ೯೮ | ಬಮುಕು | ಬದುಕು |

ಉದಯ ಪ್ರಿಂಟರ್ಸ್ ಎಂಡ್ ಪಬ್ಲಿಕೇಶನ್ಸ್ ಲಿಮಿಟೆಡ್, ಮಂಗಳೂರು.

# ಹಾರಾಮಲ್ಲೀಗಾಗಿ



## ಇವರ ಪುಸ್ತಕಗಳು

ನಾಟಕಗಳು:

ಭಾಸನ—ಮೂರು ಏಕಾಂಕ ನಾಟಕಗಳು
ದಿಙ್ನಾಗನ ಕುಂದಮಾಲೆ

ಗದ್ಯಗ್ರಂಥಗಳು:

ಪಾಶುಪತ
ಸಮುದ್ರಮಥನ

ಕವನಗಳು:

ಕರ್ಣಾಮೃತ
ಉದ್ಯಾನ

